KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು



| ಸಂಪುಟ ೧೪೬ | ಬೆಂಗಳೂರು, ಗುರುವಾರ, ಫೆಬ್ರವರಿ ೧೦, ೨೦೧೧, (ಮಾಘ ೨೧, ಶಕ ವರ್ಷ ೧೯೩೨) | ಸಂಚಿಕೆ ೬ |
|---|---|---|



## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ನಿಡಶೇಷಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2010–11/4115 ದಿನಾಂಕ : 19–07–2010.

**ಪ್ರಸ್ತಾವನೆ:**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ನಿಡಶೇಷಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ನಿಡಶೇಷಿ ಗ್ರಾಮದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಕೊಪ್ಪಳದ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ) ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ಆದೇಶಾನುಸಾರ ಹೆಚ್ಚಿನ ಪರಿಹಾರ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಮೇಲೆ ಓದಲಾದ ದಿನಾಂಕ 19–07–10ರ ಪತ್ರದಲ್ಲಿ ಕೋರಿದ್ದಾರೆ. ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ.

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ಅಡಿ ಅಧಿಸೂಚನೆ ಹೊರಡಿಸಿದ ದಿನಾಂಕ 17–10–1996.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ : 30–09–1998.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಯವರು ರಚಿಸಿದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಕೊಪ್ಪಳದ ಸಿವಿಲ್ ನ್ಯಾಯಾಲಯದಲ್ಲಿ (ಹಿರಿಯ ವಿಭಾಗ) ಒಟ್ಟು 20 ಭೂಸ್ವಾಧೀನ ಪ್ರಕರಣಗಳು ದಾಖಲಾಗಿವೆ. ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯ ದಿನಾಂಕ 01–02–05ರ ಆದೇಶದಲ್ಲಿ ಭೂಸ್ವಾಧೀನಾಧಿಕಾರಿಯವರ ಪ್ರತಿ ಎಕರೆಗೆ ನಿಗದಿಪಡಿಸಿದ್ದ ಮಾರುಕಟ್ಟೆ ಬೆಲೆ ರೂ. 20,500/– ಗಳಿಂದ ರೂ. 80,000/–ಗಳಿಗೆ ಹೆಚ್ಚಿಸಿದೆ. ಸಿವಿಲ್ ನ್ಯಾಯಾಲಯದ ಆದೇಶದ ವಿರುದ್ಧ ಕೆಲವು ಎಲ್.ಎ.ಸಿ. ಪ್ರಕರಣಗಳಲ್ಲಿ ಸರ್ಕಾರ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ್ದ ಮೇಲ್ಮನವಿಗಳನ್ನು ಪರಿಶೀಲಿಸಿ ಸಿವಿಲ್ ನ್ಯಾಯಾಲಯದ ಆದೇಶವನ್ನು ಸ್ಥಿರೀಕರಿಸಿ, ಮೇಲ್ಮನವಿಗಳನ್ನು ವಜಾ ಮಾಡಿದೆ. 7 ಎಂಎಫ್ಎ ಪ್ರಕರಣಗಳಲ್ಲಿ (ಎಂಎಫ್ಎ ಸಂಖ್ಯೆ : 3912/05ನ್ನು ಹೊರತುಪಡಿಸಿ) ಉಚ್ಚ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಇದು ಅರ್ಹವಲ್ಲವೆಂದು ಕಾನೂನು ಇಲಾಖೆಯ ಪತ್ರ ಸಂಖ್ಯೆ : ಲಾ 1974 ಎಲ್ಎಸ್‌ಪಿ 2006, ದಿನಾಂಕ : 29–11–06, ಲಾ 536 ಎಲ್ಎಸ್‌ಪಿ 09, ದಿನಾಂಕ : 04–06–09, ಲಾ 407 ಎಲ್ಎಸ್‌ಪಿ 2008, ದಿನಾಂಕ : 19–11–06, ಲಾ 1726 ಎಲ್ಎಸ್‌ಪಿ 2006, ದಿನಾಂಕ : 21–11–2006 ಮತ್ತು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ : ಆರ್‌ಡಿ 686 ಎಲ್‌ಸಿಜಿ 2009, ದಿನಾಂಕ : 23–05–09ರಲ್ಲಿ ಅಭಿಪ್ರಾಯ ಪಟ್ಟಿರುತ್ತದೆ.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಒಂದೇ ಗ್ರಾಮದ ಸ.ನಂ.ಗಳಿಗೆ ಸಂಬಂಧಿಸಿ ಹಾಗೂ ಒಂದೇ ಉದ್ದೇಶಕ್ಕೆ ಸ್ವಾಧೀನಪಡಿಸಿಕೊಂಡಿರುವುದರಿಂದ, ಎಂಎಫ್ಎ ಸಂಖ್ಯೆ : 3912/05ರ ಪ್ರಕರಣವು ಒಳಗೊಂಡಿರುವ ಮೊತ್ತ ರೂ. 11,901/–ಗಳಾಗಿರುವುದರಿಂದ, ಎಲ್ಲಾ 7 ಪ್ರಕರಣಗಳಿಗೂ ನ್ಯಾಯಾಲಯದ ತೀರ್ಪಿನಂತೆ ಹೆಚ್ಚಿನ ಪರಿಹಾರ ಧನ ಪಾವತಿಸಲು ನಿರ್ಧರಿಸಿದೆ. ಅವುಗಳ ವಿವರ ಕೆಳಕಂಡಂತಿದೆ :

| ಕ್ರ. ಸಂ. | ಎಲ್‌ಎಸಿ ಸಂಖ್ಯೆ | ಎಂಎಫ್‌ಎ ಸಂಖ್ಯೆ | ನಿಡಶೇಷಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1 | 423/2000 | 3894/05 | 19/ಅ | 6–16 | 1459696 |
| 2 | 424/2000 | 3896/05 | 19/ಇ | 3–14 | 764299 |
| 3 | 425/2000 | 3900/05 | 19/ಈ | 3–14 | 764299 |
| 4 | 432/2000 | 3910/05 | 23/ಅ | 1–26 | 376701 |
| 5 | 433/2000 | 3912/05 | 23/1ಅ | 0–02 | 11901 |
| 6 | 434/2000 | 3914/05 | 23/ಇ | 4–20 | 1026497 |
| 7 | 442/2000 | 3920/05 | 29/ಅ | 1–00 | 228501 |
| **ಒಟ್ಟು** | | | | | **4631894** |

- **ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಮೇಲ್ಕಂಡ ಎಲ್ಲಾ ಅಂಶಗಳನ್ನು ಮತ್ತು ಭೂಸ್ವಾಧೀನ ಕಾಯ್ದೆಯಂತೆ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 109 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ : 27ನೇ ನವೆಂಬರ್ 2010**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ನಿಡಶೇಷಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ನಿಡಶೇಷಿ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ಆದೇಶದಂತೆ ಪರಿಹಾರ ಮೊತ್ತ ರೂ. 46,31,894–00ಗಳನ್ನು (ನಲವತ್ತಾರು ಲಕ್ಷದ ಮೂವತ್ತೊಂದು ಸಾವಿರದ ಎಂಟು ನೂರ ತೊಂಭತ್ತಾಲ್ಕು ರೂಪಾಯಿಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಪಾವತಿಸಲು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಾಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ : 20–10–10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2927

ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕಿನ ವಿಠಲಾಪೂರ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಕೊಪ್ಪಳ (ಹಿರಿಯ ಶ್ರೇಣಿ) ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2010–11/4114, ದಿನಾಂಕ : 19–07–2010.

**ಪ್ರಸ್ತಾವನೆ:**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕಿನ ವಿಠಲಾಪೂರ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ವಿಠಲಾಪೂರ ಮತ್ತು ತಾವರಗೇರಾ ಗ್ರಾಮಗಳ ಜಮೀನುಗಳಿಗೆ ಕೊಪ್ಪಳ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ) ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ಆದೇಶಾನುಸಾರ ಹೆಚ್ಚಿನ ಪರಿಹಾರ ಪಾವತಿಸಲು ರೂ. 20,85,550–00ಗಳ ಪರಿಹಾರ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ 19–07–10ರ ಪತ್ರದಲ್ಲಿ ಕೋರಿದ್ದಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರ ಅಧಿಸೂಚನೆ ದಿನಾಂಕ 10–07–2003ರ ಪ್ರಕಾರ ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ದಿನಾಂಕ 30–09–2004ರಂದು ರಚಿಸಿದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಕೊಪ್ಪಳ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ)ದಲ್ಲಿ ದಾಖಲಿಸಿದ್ದ 5 ಎಲ್.ಎ.ಸಿ. ಪ್ರಕರಣಗಳಲ್ಲಿ ನ್ಯಾಯಾಲಯವು ದಿನಾಂಕ 02–08–2006ರಂದು ನೀಡಿರುವ ಒಂದೇ ಸಾಮಾನ್ಯ ಆದೇಶದಲ್ಲಿ ಹೆಚ್ಚಿನ ಪರಿಹಾರಧನ ನಿಗದಿಪಡಿಸಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನಲ್ಲಿ ಸೇರಿದ್ದ 5 ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ಆದೇಶದ ವಿರುದ್ಧ 3 ಪ್ರಕರಣಗಳಲ್ಲಿ ಸರ್ಕಾರ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ್ದ ಮೇಲ್ಮನವಿಗಳನ್ನು ದಿನಾಂಕ : 27–11–08ರಂದು ವಜಾ ಮಾಡಿದೆ. ಉಚ್ಚ ನ್ಯಾಯಾಲಯದ ಈ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ : ಲಾ 531 ಎಲ್‌ಎಸ್‌ಪಿ 2009, ದಿನಾಂಕ 04–06–09ರಲ್ಲಿ ತೀರ್ಮಾನ ಕೈಗೊಂಡಿದೆ.

ಉಳಿದ 2 ಎಲ್.ಎ.ಸಿ. ಪ್ರಕರಣಗಳಲ್ಲಿ ಮೇಲ್ಮನವಿ ಸಲ್ಲಿಸದಿದ್ದರೂ ಸಹ ಸಿವಿಲ್ ನ್ಯಾಯಾಲಯದ ಸಾಮಾನ್ಯ ಆದೇಶದಲ್ಲಿ ಈ ಪ್ರಕರಣಗಳು ಸೇರಿರುವುದರಿಂದ, ಎಲ್ಲಾ 5 ಪ್ರಕರಣಗಳಿಗೂ ಹಣ ಪಾವತಿಸಲು ಸರ್ಕಾರವು ನಿರ್ಧರಿಸಿದೆ. ಪರಿಹಾರ ಪಾವತಿಸಬೇಕಾದ ಪ್ರಕರಣಗಳ ವಿವರ ಕೆಳಕಂಡಂತಿವೆ :

| ಕ್ರ. ಸಂ. | ಎಲ್ಎಸಿ ಸಂಖ್ಯೆ | ಎಂಎಫ್ಎ ಸಂಖ್ಯೆ | ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|---|
| 1 | 14/06 | 2810/07 | 28/AA | 3–20 | 889137 |
| 2 | 15/06 | – | 31/E | 1–00 | 254396 |
| 3 | 16/06 | – | 383/A | 0–10 | 60789 |
| 4 | 17/06 | 2812/07 | 383/E | 0–16 | 96964 |
| 5 | 18/06 | 2813/07 | 377/2 | 3–10 | 784264 |
| **ಒಟ್ಟು** | | | | | **2085550** |

ಮೇಲ್ಕಂಡ ಎಲ್ಲಾ ಅಂಶಗಳನ್ನು ಮತ್ತು ಭೂಸ್ವಾಧೀನ ಕಾಯ್ದೆಯ ವಿಧಿವಿಧಾನಗಳಂತೆ ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 117 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ : 23ನೇ ನವೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕಿನ, ವಿಠಲಾಪೂರ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ವಿಠಲಾಪೂರ ಮತ್ತು ತಾವರಗೇರಾ ಗ್ರಾಮಗಳ ಜಮೀನುಗಳಿಗೆ ಕೊಪ್ಪಳ ಸಿವಿಲ್ ನ್ಯಾಯಾಲಯವು (ಹಿರಿಯ ಶ್ರೇಣಿ) ಎಲ್.ಎ.ಸಿ. ಸಂಖ್ಯೆ : 14/06 ರಿಂದ 18/06ರಲ್ಲಿ ನೀಡಿರುವ ಆದೇಶದಂತೆ ಹೆಚ್ಚುವರಿ ಪರಿಹಾರ ರೂ. 20,85,550–00ಗಳನ್ನು (ಇಪ್ಪತ್ತು ಲಕ್ಷದ ಎಂಭತ್ತೈದು ಸಾವಿರದ ಐನೂರ ಐವತ್ತು ರೂ.ಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಸರ್ಕಾರದ ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ, ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ : 20–10–10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಪಿ.ಆರ್. 2928

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

## ಯುವಜನ ಸೇವಾ ಸಚಿವಾಲಯ

**ವಿಷಯ :** ಶ್ರೀ ಜಿ.ಎನ್. ಮೃತ್ಯುಂಜಯ, ಲೆಕ್ಕಾಧೀಕ್ಷಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಬೆಂಗಳೂರು ಅವರು ಸಲ್ಲಿಸಿದ ಮೇಲ್ಮನವಿ – ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**

1. ಅನಧಿಕೃತ ಜ್ಞಾಪನ ಸಂಖ್ಯೆ : ಡಿವೈಎಸ್ಎಸ್/50/ಸಿ2/89–90 ದಿನಾಂಕ : 04–12–2007 ಆಯುಕ್ತರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಅವರಿಂದ.
2. ಅರ್ಜಿ ಸಂಖ್ಯೆ : 5026/2007 ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ದಿನಾಂಕ : 11–12–2007ರ ಆದೇಶ.
3. ಶ್ರೀ ಜಿ.ಎನ್.ಮೃತ್ಯುಂಜಯ, ಲೆಕ್ಕಾಧೀಕ್ಷಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಅವರ ಮೇಲ್ಮನವಿ ದಿನಾಂಕ : 14–12–2007.
4. ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 122 ಯುಇಸೇ 2007 ದಿನಾಂಕ: 15–12–2007.
5. ಆಯುಕ್ತರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ : ಡಿವೈಎಸ್ಎಸ್ 50/ಸಿ2/89–90, ದಿನಾಂಕ : 28–03–2009.
6. ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 41 ಯುಇಸೇ 2008 ದಿನಾಂಕ: 24–04–2009.
7. ಅರ್ಜಿ ಸಂಖ್ಯೆ : 2028/2009 ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ದಿನಾಂಕ : 29–04–2009 ರಂದು ನೀಡಿದ ಆದೇಶ.

8. ಆಯುಕ್ತರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ : ಡಿವೈಎಸ್ಎಸ್ 50/ಸಿ2/89-90, ದಿನಾಂಕ : 02-12-2009.
9. ಪತ್ರದ ಸಂಖ್ಯೆ: ಯುಸೇಇ 41 ಯುಇಸೇ 2008(ಭಾ) ದಿನಾಂಕ: 19-01-2010.
10. ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಅವರ ಅಧಿಕೃತ ಜ್ಞಾಪನ ಸಂಖ್ಯೆ : ಡಿವೈಎಸ್ಎಸ್ 50/ಸಿ2/89-90, ದಿನಾಂಕ : 21-01-2010.
11. ಅರ್ಜಿ ಸಂಖ್ಯೆ : 520/2010 ರಲ್ಲಿ ಕರ್ನಾಟಕ ನ್ಯಾಯ ಮಂಡಳಿಯು ದಿನಾಂಕ : 25-11-2010 ರಂದು ನೀಡಿದ ಆದೇಶ.
12. ಆಯುಕ್ತರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಅವರ ಪತ್ರ ಸಂಖ್ಯೆ : ಸಿವೈಎಸ್ಎಸ್ 50/ಸಿ2/89-90, ದಿನಾಂಕ : 06/10-09-2008.

**ಪ್ರಸ್ತಾವನೆ:**

ಶ್ರೀ ಜೆ.ಎನ್. ಮೃತ್ಯುಂಜಯ, ಶೀಘ್ರಲಿಪಿಗಾರರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಅವರನ್ನು ದಿನಾಂಕ : 06-04-1996ರಂದು ಇಲಾಖೆಯ ಲೆಕ್ಕಾಧೀಕ್ಷಕರ ಹುದ್ದೆಯಲ್ಲಿ ಸ್ವತಂತ್ರ ಪ್ರಭಾರದ ಮೇಲೆ ನೇಮಿಸಲಾಗಿತ್ತು. ಅನಂತರ ದಿ : 20-06-1996ರಲ್ಲಿ ಅವರನ್ನು ಸದರಿ ಹುದ್ದೆಯ ವೇತನ ಶ್ರೇಣಿ ರೂ. 1720-3300 ರಲ್ಲಿ ನೇಮಿಸಲಾಗಿತ್ತು. ಮಹಾಲೇಖಪಾಲರ ಆಡಿಟ್ ವರದಿಯಲ್ಲಿ ಶ್ರೀ ಜಿ.ಎನ್.ಮೃತ್ಯುಂಜಯ, ಲೆಕ್ಕಾಧೀಕ್ಷಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಅವರಿಗೆ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ವಿರುದ್ಧವಾಗಿ ಲೆಕ್ಕಾಧೀಕ್ಷಕರ ಹುದ್ದೆಗೆ ಬಡ್ತಿ ನೀಡಿರುವುದಕ್ಕೆ ಆಕ್ಷೇಪಣೆ ಸೂಚಿಸಿ ಅವರಿಗೆ ಹೆಚ್ಚಿಗೆ ಪಾವತಿಸಲಾದ ವೇತನವನ್ನು ವಸೂಲು ಮಾಡುವಂತೆ ನಿರ್ದೇಶಿಸಲಾಯಿತು.

ಅದನ್ನನುಸರಿಸಿ ಮೇಲೆ (1)ರಲ್ಲಿ ಓದಲಾದ ದಿ : 04-12-2007ರ ಅಧಿಕೃತ ಜ್ಞಾಪನದಲ್ಲಿ ಆಯುಕ್ತರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಅವರು ಶ್ರಿ ಜಿ.ಎನ್.ಮೃತ್ಯುಂಜಯ, ಲೆಕ್ಕಾಧೀಕ್ಷಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಅವರನ್ನು ಲೆಕ್ಕಾಧೀಕ್ಷಕರ ಹುದ್ದೆಯಿಂದ ಶೀಘ್ರಲಿಪಿಗಾರರ ಹುದ್ದೆಗೆ ಹಿಂಬಡ್ತಿ ನೀಡಿದರು. ಇದನ್ನು ಪ್ರಶ್ನಿಸಿ ಶ್ರೀ ಜಿ.ಎನ್.ಮೃತ್ಯುಂಜಯ, ಅವರು ಸಲ್ಲಿಸಿದ ಅರ್ಜಿ ಸಂಖ್ಯೆ : 5026/2007ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಮೇಲೆ (2)ರಲ್ಲಿ ಓದಲಾದ 11-12-2007ರ ಆದೇಶ ಹೊರಡಿಸಿ ಮೇಲ್ಮನವಿಗೆ ಇರುವ ಅವಕಾಶವನ್ನು ಬಳಸಿಕೊಳ್ಳದ ಕಾರಣ ಅರ್ಜಿಯನ್ನು ವಜಾ ಮಾಡಿ ಮೇಲ್ಮನವಿ ಅವಕಾಶ ಬಳಸಿಕೊಳ್ಳಲು ನಿರ್ದೇಶಿಸಿದರು. ಅದರಂತೆ ಶ್ರೀ ಜಿ.ಎನ್.ಮೃತ್ಯುಂಜಯ, ಅವರು ಮೇಲೆ (3)ರಲ್ಲಿ ಓದಲಾದ ದಿ : 14-12-2007ರ ಮೇಲ್ಮನವಿಯನ್ನು ಸರ್ಕಾರಕ್ಕೆ ಸಲ್ಲಿಸಿದರು. ಇದರನ್ವಯ ಮೇಲೆ ಓದಲಾದ (4)ರಲ್ಲಿ ದಿ : 15-12-2007ರಲ್ಲಿ ಮೇಲ್ಮನವಿಯನ್ನು ಪುರಸ್ಕರಿಸಲಾಯಿತು ಹಾಗೂ ಆಯುಕ್ತರು ಹೊರಡಿಸಿದ ದಿ : 04-12-2007ರ ಅಧಿಕೃತ ಜ್ಞಾಪನಕ್ಕೆ ಮುಂದಿನ ಆದೇಶದವರೆಗೆ ತಡೆಯಾಜ್ಞೆ ನೀಡಲಾಯಿತು. ಆಯುಕ್ತರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಮೇಲೆ (5)ರಲ್ಲಿ ಓದಲಾದ ದಿ : 28-03-2009ರ ಪತ್ರದಲ್ಲಿ ದಿ : 15-12-2007ರ ತಡೆಯಾಜ್ಞೆ ಅನುಸರಿಸಿ ಮೇಲ್ಮನವಿ ಕುರಿತು ಅಂತಿಮ ಆದೇಶ ಹೊರಡಿಸುವಂತೆ ಕೋರಿದರು. ಅದರನ್ವಯ ಮೇಲೆ (6)ರಲ್ಲಿ ಓದಲಾದ ದಿ : 24-04-2009ರ ಸರ್ಕಾರಿ ಆದೇಶದಲ್ಲಿ ಆಯುಕ್ತರ ದಿ : 04-12-2007ರ ಅಧಿಕೃತ ಜ್ಞಾಪನಕ್ಕೆ ನೀಡಲಾದ ತಡೆಯಾಜ್ಞೆಯನ್ನು ರದ್ದುಪಡಿಸಲಾಯಿತು. ಆನಂತರ ಶ್ರೀ ಜಿ.ಎನ್.ಮೃತ್ಯುಂಜಯ, ಅವರು ದಿ : 04-12-2007ರ ಅಧಿಕೃತ ಜ್ಞಾಪನವನ್ನು ಪ್ರಶ್ನಿಸಿ ಸಲ್ಲಿಸಿದ ಅರ್ಜಿ ಸಂಖ್ಯೆ : 2028/2009ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ದಿ : 29-04-2009ರ ಆದೇಶ ನೀಡಿ ಅರ್ಜಿದಾರರು ಸಲ್ಲಿಸಿರುವ ಮೇಲ್ಮನವಿಯನ್ನು 2 ತಿಂಗಳೊಳಗಾಗಿ ಇತ್ಯರ್ಥಪಡಿಸುವಂತೆ ನಿರ್ದೇಶನ ನೀಡಿತು. ಅದರಂತೆ ಪರಿಶೀಲಿಸಿ ಶ್ರೀ ಜಿ.ಎನ್.ಮೃತ್ಯುಂಜಯ ಅವರಿಗೆ ಬಡ್ತಿ ನೀಡುವುದು ಸೇರಿದಂತೆ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ನು ತಿದ್ದುಪಡಿ ಮಾಡಲು ಕ್ರಮ ಕೈಗೊಳ್ಳಬೇಕೆಂದು ಹಾಗೂ ಅದಕ್ಕಾಗಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಇವರು ಪ್ರಸ್ತಾವನೆ ಸಲ್ಲಿಸಬೇಕೆಂದು 15-09-2009ರಂದು ನಡೆದ ವೃಂದ ಪರಿಶೀಲನಾ ಉಪ ಸಮಿತಿ ಸಭೆಯಲ್ಲಿ ನಿರ್ಣಯ ಕೈಗೊಳ್ಳಲಾಯಿತು. ಅದರಂತೆ ದಿನಾಂಕ : 26-10-2009ರ ಪತ್ರದಲ್ಲಿ ನಿರ್ದೇಶಕರಿಗೆ ಸೂಚನೆಗಳನ್ನು ನೀಡಲಾಯಿತು. ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಇವರು ಮೇಲೆ (8)ರಲ್ಲಿ ಓದಲಾದ ದಿನಾಂಕ : 02-12-2009ರ ಪತ್ರದಲ್ಲಿ ಶ್ರೀ ಜಿ.ಎನ್.ಮೃತ್ಯಂಜಯ ಅವರ ಮೇಲ್ಮನವಿ ಕುರಿತು ಅಂತಿಮ ನಿರ್ಣಯ ಹೊರಡಿಸುವಂತೆ ಕೋರಿದ ಮೇರೆಗೆ ಮೇಲೆ (9)ರಲ್ಲಿ ಓದಲಾದ ದಿನಾಂಕ : 19-01-2010ರ ಪತ್ರದಲ್ಲಿ ಶ್ರೀ ಮೃತ್ಯುಂಜಯ ಅವರ ಮೇಲ್ಮನವಿಯು ಸರ್ಕಾರದಲ್ಲಿ ಬಾಕಿ ಇರುವುದಿಲ್ಲವೆಂದು ತಿಳಿಸಲಾಯಿತು.

ಇದನ್ನನುಸರಿಸಿ ನಿರ್ದೇಶಕರು ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಇವರು ಮೇಲೆ (10)ರಲ್ಲಿ ಓದಲಾದ ದಿನಾಂಕ : 21-01-2010ರ ಅಧಿಕೃತ ಜ್ಞಾಪನದಲ್ಲಿ ಶ್ರೀ ಜಿ.ಎನ್. ಮೃತ್ಯುಂಜಯ ಅವರನ್ನು ಲೆಕ್ಕಾಧೀಕ್ಷಕರ ಹುದ್ದೆಯಿಂದ ಶೀಘ್ರಲಿಪಿಗಾರರ ಹುದ್ದೆಗೆ ಹಿಂಬಡ್ತಿ ಮಾಡಿದರು. ಇದನ್ನು ಪ್ರಶ್ನಿಸಿ ಶ್ರೀ ಜಿ.ಎನ್.ಮೃತ್ಯುಂಜಯ ಅವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ : 520/2010 ಸಲ್ಲಿಸಲಾಗಿ ಮಂಡಳಿಯು ತನ್ನ ದಿನಾಂಕ : 25-01-2010ರ ಆದೇಶದಲ್ಲಿ ಅರ್ಜಿದಾರರ ಹಿಂಬಡ್ತಿಗೆ 4 ವಾರಗಳ ಮಧ್ಯಂತರ ತಡೆಯಾಜ್ಞೆ ನೀಡಿತು. ಸದರಿ ತಡೆಯಾಜ್ಞೆಯು ಆಗಿಂದಾಗ್ಗೆ ವಿಸ್ತರಿಸಲ್ಪಟ್ಟಿದೆ. ಇದನ್ನು ಪರಿಗಣಿಸಿದ ಮಂಡಳಿಯು ಮೇಲೆ (11)ರಲ್ಲಿ ಓದಲಾದ ದಿನಾಂಕ : 25-11-2010ರ ಮಧ್ಯಂತರ ಆದೇಶದಲ್ಲಿ ಆಕ್ಷೇಪಣೆಯನ್ನು 06-12-2010ರ ಒಳಗೆ ಸಲ್ಲಿಸುವಂತೆ ಹಾಗೂ ಅರ್ಜಿದಾರರು ಸಲ್ಲಿಸಿದ ಮೇಲ್ಮನವಿಯ ಮೇಲೆ ಹೊರಡಿಸಲಾದ ಆದೇಶವನ್ನು ಸಲ್ಲಿಸಲು ನಿರ್ದೇಶಿಸಿದೆ. ಇದನ್ನು ಪರಿಶೀಲಿಸಲಾಗಿದೆ. ಶ್ರೀ ಜಿ.ಎನ್.ಮೃತ್ಯುಂಜಯ ಅವರು ಸಲ್ಲಿಸಿದ ದಿನಾಂಕ : 14-12-2007ರ ಮೇಲ್ಮನವಿಗೆ ಆಯುಕ್ತರು ಮೇಲೆ (12)ರಲ್ಲಿ ಓದಲಾದ ದಿನಾಂಕ : 06/10-09-2008ರಂದು ಸಲ್ಲಿಸಿದ ಕಂಡಿಕೆವಾರು ಉತ್ತರವನ್ನು ಪರಿಶೀಲಿಸಲಾಗಿದೆ. ಮೇಲ್ಮನವಿದಾರರಿಗೆ ನೀಡಿರುವ ಬಡ್ತಿಯು ವೃಂದ ಮತ್ತು ನೇಮಕಾತಿ ನಿಯಮಗಳಿಗೆ ವಿರುದ್ಧವಾಗಿದ್ದು ಇದನ್ನು ಮಹಾಲೇಖಪಾಲರ ಆಡಿಟ್ ಆಕ್ಷೇಪಣೆ ಮೇರೆಗೆ ಮರು ಪರಿಶೀಲಿಸಿ, ಆಡಿಟ್ ಆಕ್ಷೇಪಣೆಗಳನ್ನು ಕೈಬಿಡುವ ಸಲುವಾಗಿ ಸೂಕ್ತ ಉತ್ತರವನ್ನು ನೀಡಲು ಅನುಕೂಲವಾಗುವಂತೆ ಮೇಲ್ಮನವಿದಾರರನ್ನು ಶೀಘ್ರಲಿಪಿಗಾರರ ಹುದ್ದೆಗೆ ಹಿಂಬಡ್ತಿಗೊಳಿಸಲಾಗಿದ್ದು ಇದಕ್ಕೆ ನೀಡಿರುವ ತಡೆಯಾಜ್ಞೆಯನ್ನು ರದ್ದುಪಡಿಸಿ ಮೇಲ್ಮನವಿಯನ್ನು ವಜಾ ಮಾಡುವಂತೆ ಆಯುಕ್ತರು ಕೋರಿದ್ದಾರೆ.

ಆಯುಕ್ತರು ತಿಳಿಸಿರುವಂತೆ ಶೀಘ್ರಲಿಪಿಗಾರರ ಹುದ್ದೆಯಿಂದಲೂ ಸಹ ಲೆಕ್ಕಾಧೀಕ್ಷಕರ ಹುದ್ದೆಗೆ ಬಡ್ತಿ ಪಡೆಯಲು ಅವಕಾಶ ಕಲ್ಪಿಸಿ ಯುವಜನ ಸೇವಾ ಕ್ರೀಡಾ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ನು ತಿದ್ದುಪಡಿ ಮಾಡಲಾಗುತ್ತಿದ್ದು ಅದು ವೃಂದ ಪರಿಶೀಲನಾ ಉಪ ಸಮಿತಿಯಿಂದ ಅಂಗೀಕಾರಗೊಂಡಿದ್ದು ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆಯ ಪರಾಮರ್ಶೆಯಲ್ಲಿದೆ. ಅದನ್ನು ವೃಂದ ಪರಿಶೀಲನಾ ಸಮಿತಿಯ ಮುಂದಿಟ್ಟು ಅದರ ಸಮ್ಮತಿಯೊಡನೆ ಸಚಿವ ಸಂಪುಟದ ಅನುಮತಿ ಪಡೆದು ನಿಯಮಾವಳಿ ಜಾರಿಗೆ ಬಂದ ನಂತರ ಶ್ರೀ ಜಿ.ಎನ್.ಮೃತ್ಯುಂಜಯ ಅವರನ್ನು

ಲೆಕ್ಕಾಧೀಕ್ಷಕರ ಹುದ್ದೆಗೆ ಬಡ್ತಿ ನೀಡುವ ಕುರಿತು ಪರಿಶೀಲಿಸಬಹುದಾಗಿದೆ. ಅದುವರೆಗೆ ಅವರ ಬಡ್ತಿಯನ್ನು ಪರಿಶೀಲಿಸಲು ಅವಕಾಶವಿರುವುದಿಲ್ಲ. ಆದ್ದರಿಂದ, ಈ ಮುಂದಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಯುಸೇಇ 41 ಯುಇಸೇ 2008, ಬೆಂಗಳೂರು, ದಿನಾಂಕ: 02-12-2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ವಾಸ್ತವಾಂಶಗಳ ಹಿನ್ನೆಲೆಯಲ್ಲಿ, ಶ್ರೀ ಜಿ.ಎನ್.ಮೃತ್ಯುಂಜಯ, ಶೀಘ್ರಲಿಪಿಗಾರರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಇವರು ಸಲ್ಲಿಸಿದ ದಿನಾಂಕ : 14-12-2007ರ ಮೇಲ್ಮನವಿಯನ್ನು ತಿರಸ್ಕರಿಸಿದೆ ಹಾಗೂ ಇವರಿಗೆ ಶೀಘ್ರಲಿಪಿಗಾರರ ಹುದ್ದೆಗೆ ಹಿಂಬಡ್ತಿ ನೀಡಿದ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಆಯುಕ್ತರ ದಿನಾಂಕ : 04-12-2007 ಹಾಗೂ 21-01-2010ರ ಅಧಿಕೃತ ಜ್ಞಾಪನೆಗಳನ್ನು ಸರ್ಕಾರವು ಎತ್ತಿಹಿಡಿದಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಯುವಜನ ಸೇವಾ ಇಲಾಖೆ.

ಪಿ.ಆರ್. 2929

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ** : 2010-11ನೇ ಶೈಕ್ಷಣಿಕ ಸಾಲಿಗೆ 01 ಅನುದಾನರಹಿತ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯದಲ್ಲಿ ಪದವಿ ಕೋರ್ಸ್‌ಗಳ ಪ್ರವೇಶಕ್ಕೆ ಸೀಟ್ ಮ್ಯಾಟ್ರಿಕ್ಸ್ ನಿಗದಿಗೊಳಿಸುವ ಬಗ್ಗೆ.

**ಓದಲಾಗಿದೆ** :
(1) ಸರ್ಕಾರದ ಆದೇಶ ಸಂಖ್ಯೆ: ಆಕುಕ 138 ಪಿಟಿಡಿ 2010, ದಿನಾಂಕ 23-09-2010
(2) ಸರ್ಕಾರದ ಆದೇಶ ಸಂಖ್ಯೆ: ಆಕುಕ 138 ಪಿಟಿಡಿ 2010, ದಿನಾಂಕ 27-09-2010
(3) ಸರ್ಕಾರದ ಆದೇಶ ಸಂಖ್ಯೆ: ಆಕುಕ 138 ಪಿಟಿಡಿ 2010, ದಿನಾಂಕ 26-10-2010
(4) ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಆಯುಷ್/03/ಅಭಿವೃದ್ಧಿ(2)/2010-11, ದಿನಾಂಕ 25-10-2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿನ ಸರ್ಕಾರದ ಆದೇಶದಲ್ಲಿ, ಪದವಿ ಕೋರ್ಸುಗಳ ಪ್ರವೇಶಕ್ಕೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರವು ರಾಜ್ಯದಲ್ಲಿನ 03 ಅನುದಾನಿತ ಹಾಗೂ 08 ಅನುದಾನರಹಿತ (ಒಟ್ಟು 11) ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯಗಳಿಗೆ 2010-11ನೇ ಸಾಲಿಗೆ ಮಾನ್ಯತೆ ನೀಡಿದ್ದು ನಿಯಮಾನುಸಾರ ಸೀಟುಗಳ ಹಂಚಿಕೆಯನ್ನು ಮಾಡಿ, ಸೀಟ್ ಮ್ಯಾಟ್ರಿಕ್ಸ್‌ನ್ನು ನಿಗದಿಪಡಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರ.ಸಂ. (2) ರಲ್ಲಿನ ಸರ್ಕಾರದ ಆದೇಶದಲ್ಲಿ, ಪದವಿ ಕೋರ್ಸುಗಳ ಪ್ರವೇಶಕ್ಕೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರವು ರಾಜ್ಯದಲ್ಲಿನ 01 ಅನುದಾನಿತ ಮತ್ತು 02 ಅನುದಾನರಹಿತ (ಒಟ್ಟು 03) ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯಗಳಲ್ಲಿ ಹಾಗೂ 01 ಅನುದಾನರಹಿತ ಯುನಾನಿ ವೈದ್ಯಕೀಯ ಮಹಾವಿದ್ಯಾಲಯಗಳಿಗೆ 2010-11ನೇ ಸಾಲಿಗೆ ಮಾನ್ಯತೆ ನೀಡಿದ್ದು, ನಿಯಮಾನುಸಾರ ಸೀಟುಗಳ ಹಂಚಿಕೆಯನ್ನು ಮಾಡಿ, ಸೀಟ್ ಮ್ಯಾಟ್ರಿಕ್ಸ್‌ನ್ನು ನಿಗದಿಪಡಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರ.ಸಂ. (3) ರಲ್ಲಿನ ಸರ್ಕಾರದ ಆದೇಶದಲ್ಲಿ ಕೇಂದ್ರ ಸರ್ಕಾರವು ರಾಜ್ಯದಲ್ಲಿನ 04 ಅನುದಾನರಹಿತ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯಗಳಿಗೆ 2010-11ನೇ ಸಾಲಿಗೆ ಮಾನ್ಯತೆ ನೀಡಿದ್ದು, ನಿಯಮಾನುಸಾರ ಸೀಟುಗಳ ಹಂಚಿಕೆಯನ್ನು ಮಾಡಿ, ಸೀಟ್ ಮ್ಯಾಟ್ರಿಕ್ಸ್‌ನ್ನು ನಿಗದಿಪಡಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರ. ಸಂ. (4)ರ ಆಯುಷ್ ನಿರ್ದೇಶಕರ ಪ್ರಸ್ತಾವನೆಯಲ್ಲಿ ಕೇಂದ್ರ ಸರ್ಕಾರವು ರಾಜ್ಯದಲ್ಲಿನ 01 ಅನುದಾನರಹಿತ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯಕ್ಕೆ 2010-11ನೇ ಸಾಲಿಗೆ ಮಾನ್ಯತೆ ನೀಡಿದ್ದು ಈ ಮಹಾವಿದ್ಯಾಲಯದ ಪಟ್ಟಿಯನ್ನು ಸಲ್ಲಿಸಿ, ಅನುಬಂಧ-ಖ ರಲ್ಲಿರುವಂತೆ ಸೀಟ್ ಮ್ಯಾಟ್ರಿಕ್ಸ್‌ನ್ನು ನಿಗದಿಪಡಿಸಿ ಅದೇಶ ಹೊರಡಿಸುವಂತೆ ಶಿಫಾರಸ್ಸು ಮಾಡಿದ್ದಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 138 ಪಿಟಿಡಿ 2010, ಬೆಂಗಳೂರು, ದಿನಾಂಕ: 04-11-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೇಂದ್ರ ಸರ್ಕಾರವು ರಾಜ್ಯದಲ್ಲಿನ 01 ಅನುದಾನರಹಿತ ಎನ್. ಕೆ. ಜಬಶೆಟ್ಟಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯಕ್ಕೆ 2010-11ನೇ ಸಾಲಿಗೆ ಮಾನ್ಯತೆ ನೀಡಿದ್ದು, ಸದರಿ ಮಹಾವಿದ್ಯಾಲಯಕ್ಕೆ ನಿಯಮಾನುಸಾರ ಸೀಟುಗಳ ಹಂಚಿಕೆಯನ್ನು ಮಾಡಿ, ಸೀಟ್ ಮ್ಯಾಟ್ರಿಕ್ಸ್‌ನ್ನು ಅನುಬಂಧ-ಖ ರಲ್ಲಿ ನಿಗದಿಪಡಿಸಿ ಅದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಎಸ್. ಇಟಗಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾರತೀಯ ವೈದ್ಯ ಪದ್ಧತಿ)

ಪಿ.ಆರ್. 2830

## ANNEXURE-1

Government Seats in Un-Aided Ayurvedic Medical Colleges for the Academic year 2010-11

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 |
|---|---|---|---|---|---|---|---|---|---|---|---|---|---|
| Sl No | Name of the College | Total Intake | No. of Govt Seats | Special Quota | GM-50% | | | SC-15% | | | ST-3% | | |
| | | | | PH Quota | GM | GM | GM | SC | SC | SC | ST | ST | ST |
| | | | | | | (R) | (K) | | (R) | (K) | | (R) | (K) |
| 1 | Un-Aided COLLEGE N.K.Jabshetty Ayurvedic Medical College, BIdar | 60 | 12 | 1 | 3 | 1 | 1 | 2 | 0 | 1 | 1 | 0 | 0 |
| | **Total** | **60** | **12** | **1** | **3** | **1** | **1** | **2** | **0** | **1** | **1** | **0** | **0** |

| 15 | 16 | 17 | 18 | 19 | 20 | 21 | 22 | 23 | 24 | 25 | 26 | 27 | 28 | 29 |
|---|---|---|---|---|---|---|---|---|---|---|---|---|---|---|
| Cat-1-4% | | | II(a)-15% | | | | II(b)4% | | III(a) 4% | | | III(b) 5% | | |
| Cat-1 | Cat-(R) | Cat-(K) | II(a) | II(a) | II(a) | II(b) | II(b) | II(b) | III(a) | III(a) | III(a) | III(b) | III(b) | III(b) |
| | | | | (R) | (K) | | (R) | (K) | | (R) | (K) | | (R) | (K) |
| 0 | 0 | 0 | 1 | 0 | 0 | 0 | 0 | 0 | 0 | 0 | 0 | 0 | 1 | 0 |
| **0** | **0** | **0** | **1** | **0** | **0** | **0** | **0** | **0** | **0** | **0** | **0** | **0** | **1** | **0** |

**R.S. Itagi**
Under Secretary to Government
Health & Family Welfare Department (IMD)

PR 2830

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಜಿಲ್ಲಾಮಟ್ಟದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಮತ್ತು 20 ಅಂಶಗಳ/15 ಅಂಶಗಳ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಉಸ್ತುವಾರಿ ಸಚಿವರುಗಳನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :** 1. ಮಾನ್ಯ ಮುಖ್ಯಮಂತ್ರಿಯವರ ಟಿಪ್ಪಣಿ ಸಂಖ್ಯೆ: ಪಿಎಸ್‌ಸಿಎಂ/3468/2010 ದಿನಾಂಕ: 12–11–2010.
2. ಸರ್ಕಾರಿ ಆದೇಶ ಸಂಖ್ಯೆ: ಯೋಇ 121 ಯೋವಿವಿ 2010 ದಿನಾಂಕ: 28–09–2010.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಟಿಪ್ಪಣಿಯಲ್ಲಿ ಮಾನ್ಯ ಮುಖ್ಯಮಂತ್ರಿಗಳು 30 ಜಿಲ್ಲೆಗಳಿಗೆ ಉಸ್ತುವಾರಿ ಸಚಿವರನ್ನು ನೇಮಕ ಮಾಡಲು ಆದೇಶ ಹೊರಡಿಸುವಂತೆ ಸೂಚಿಸಿದ್ದು, ಅದರಂತೆ ಮೇಲೆ ಓದಲಾದ (2)ರ ಆದೇಶವನ್ನು ರದ್ದುಪಡಿಸಿ ಜಿಲ್ಲಾ ಉಸ್ತುವಾರಿ ಸಚಿವರನ್ನಾಗಿ ನೇಮಕ ಮಾಡಲು ಉದ್ದೇಶಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಯೋಇ 147 ಯೋವಿವಿ 2010 ಬೆಂಗಳೂರು, ದಿನಾಂಕ: 16ನೇ ನವೆಂಬರ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಜಿಲ್ಲಾಮಟ್ಟದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಮತ್ತು 20 ಅಂಶಗಳ/15 ಅಂಶಗಳ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಅನುಬಂಧ–Iರಲ್ಲಿನ ಸಚಿವರುಗಳನ್ನು ಜಿಲ್ಲಾ ಉಸ್ತುವಾರಿ ಸಚಿವರುಗಳನ್ನಾಗಿ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ಚಿಕ್ಕರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ 1 ಮತ್ತು 2
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ

## ಅನುಬಂಧ

**ಸರ್ಕಾರಿ ಆದೇಶ ಸಂಖ್ಯೆ: ಯೋಇ 147 ಯೋವಿವಿ 2010, ದಿನಾಂಕ: 16–11–2010**

| ಕ್ರಮ ಸಂಖ್ಯೆ | ಸಚಿವರುಗಳ ಹೆಸರು | ಜಿಲ್ಲೆಗಳ ಹೆಸರು |
|---|---|---|
| 1 | ಶ್ರೀ ಬಿ.ಎಸ್. ಯಡಿಯೂರಪ್ಪ ಮುಖ್ಯಮಂತ್ರಿಗಳು | ಶಿವಮೊಗ್ಗ |
| 2 | ಶ್ರೀ ಗೋವಿಂದ ಕಾರಜೋಳ | ಬಾಗಲಕೋಟೆ |
| 3 | ಡಾ: ವಿ.ಎಸ್. ಆಚಾರ್ಯ | ಉಡುಪಿ |
| 4 | ಶ್ರೀ ಸಿ.ಎಂ. ಉದಾಸಿ | ಹಾವೇರಿ |
| 5 | ಶ್ರೀ ಆರ್. ಅಶೋಕ್ | ಬೆಂಗಳೂರು ನಗರ (ಬೆಂಗಳೂರು ದಕ್ಷಿಣ ಜಿಲ್ಲೆಯ 14 ವಿಧಾನಸಭಾ ಕ್ಷೇತ್ರಗಳು) ಮಂಡ್ಯ |
| 6 | ಶ್ರೀ ಎಸ್.ಎ. ರವೀಂದ್ರನಾಥ್ | ದಾವಣಗೆರೆ |
| 7 | ಶ್ರೀ ಜಿ. ಜನಾರ್ಧನ ರೆಡ್ಡಿ | ಬಳ್ಳಾರಿ |
| 8 | ಶ್ರೀ ಕಾಗೇರಿ ವಿಶ್ವೇಶ್ವರ ಹೆಗಡೆ | ಉತ್ತರ ಕನ್ನಡ |
| 9 | ಶ್ರೀ ಜಿ. ಕರುಣಾಕರ ರೆಡ್ಡಿ | ಚಿತ್ರದುರ್ಗ |
| 10 | ಶ್ರೀ ಬಿ.ಎನ್. ಬಚ್ಚೇಗೌಡ | ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ |
| 11 | ಶ್ರೀ ಬಸವರಾಜ ಬೊಮ್ಮಾಯಿ | ಗುಲ್ಬರ್ಗಾ |
| 12 | ಶ್ರೀ ಜಗದೀಶ್ ಶೆಟ್ಟರ್ | ಧಾರವಾಡ |
| 13 | ಶ್ರೀ ಬಿ. ಶ್ರೀರಾಮುಲು | ರಾಯಚೂರು |
| 14 | ಶ್ರೀ ರೇವುನಾಯಕ್ ಬೆಳಮಗಿ | ಬೀದರ್ |
| 15 | ಶ್ರೀ ಜೆ. ಕೃಷ್ಣ ಪಾಲೇಮಾರ್ | ದಕ್ಷಿಣ ಕನ್ನಡ |
| 16 | ಶ್ರೀ ಮುರುಗೇಶ್ ರುದ್ರಪ್ಪ ನಿರಾಣಿ | ಬಿಜಾಪುರ |
| 17 | ಶ್ರೀ ಉಮೇಶ್ ವಿ. ಕತ್ತಿ | ಬೆಳಗಾವಿ |
| 18 | ಶ್ರೀ ಎಂ.ಪಿ. ರೇಣುಕಾಚಾರ್ಯ | ಹಾಸನ |
| 19 | ಶ್ರೀ ಕಟ್ಟಾಸುಬ್ರಮಣ್ಯನಾಯ್ಡು | ಬೆಂಗಳೂರು ನಗರ (ಬೆಂಗಳೂರು ಉತ್ತರ ಜಿಲ್ಲೆಯ 14 ವಿಧಾನಸಭಾ ಕ್ಷೇತ್ರಗಳು) |
| 20 | ಕುಮಾರಿ ಶೋಭಾ ಕರಂದ್ಲಾಜೆ | ಚಿಕ್ಕಬಳ್ಳಾಪುರ |
| 21 | ಶ್ರೀ ವಿ. ಸೋಮಣ್ಣ | ತುಮಕೂರು |
| 22 | ಶ್ರೀ ಸಿ.ಹೆಚ್. ವಿಜಯಶಂಕರ್ | ಕೊಡಗು ಮತ್ತು ಚಾಮರಾಜನಗರ |
| 23 | ಶ್ರೀ ಎ. ನಾರಾಯಣಸ್ವಾಮಿ | ಕೋಲಾರ |
| 24 | ಶ್ರೀ ಎಸ್.ಎ. ರಾಮದಾಸ್ | ಮೈಸೂರು |
| 25 | ಶ್ರೀ ಸಿ.ಸಿ. ಪಾಟೀಲ್ | ಗದಗ್ |
| 26 | ಶ್ರೀ ಲಕ್ಷ್ಮಣ ಸವದಿ | ಕೊಪ್ಪಳ |
| 27 | ಶ್ರೀ ಆರ್. ಸುರೇಶ್ ಕುಮಾರ್ | ಚಿಕ್ಕಮಗಳೂರು |
| 28 | ಶ್ರೀ ಮಮ್ತಾಜ್ ಅಲಿ ಖಾನ್ | ಯಾದಗಿರಿ |

**ಬಿ. ಚಿಕ್ಕರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ 1 ಮತ್ತು 2
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ

ಪಿ.ಆರ್. ನಂ. 2843

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಹಾವೇರಿ ಜಿಲ್ಲೆ, ಸವಣೂರು ತಾಲ್ಲೂಕಿನ ತೆವರಮಳ್ಳಿಹಳ್ಳಿ ಕೆರೆ ಹಾಗೂ ಮೋತಿತಲಾಬ ಕೆರೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವಿಭಾಗ, ಗದಗ್ ಇವರಿಗೆ ಹಸ್ತಾಂತರಿಸುವ ಕುರಿತು.

**ಓದಲಾಗಿದೆ** : ಮುಖ್ಯಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇ/ಸನೀ(ಉ)ವಲಯ/ಬಿಜೆಪಿ/ಪಿ.ಬಿ–3/2010–11/4589, ದಿನಾಂಕ: 11–08–2010.

**ಪ್ರಸ್ತಾವನೆ:**

ಸಣ್ಣ ಮತ್ತು ಮಧ್ಯಮ ನಗರ/ಪಟ್ಟಣಗಳ ಮೂಲ ಸೌಕರ್ಯ ಅಭಿವೃದ್ಧಿ ಯೋಜನೆಯಡಿಯಲ್ಲಿ ಹಾವೇರಿ ಜಿಲ್ಲೆಯ ಶಿಗ್ಗಾಂವ ಮತ್ತು ಸವಣೂರು ಹಾಗೂ ಬಂಕಾಪುರ ಪಟ್ಟಣಗಳಿಗೆ ಕುಡಿಯುವ ನೀರು ಪೂರೈಸಲು ಮೋತಿತಲಾಬ್ ಕೆರೆ ಹಾಗೂ ತೆವರಮಳ್ಳಿಹಳ್ಳಿ ಕೆರೆಗಳನ್ನು ಹಸ್ತಾಂತರಿಸುವಂತೆ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವಿಭಾಗ, ಗದಗ್ ಇವರು ಕೋರಿರುವುದರಿಂದ. ಸದರಿ ಕೆರೆಗಳನ್ನು ಹಸ್ತಾಂತರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ: 11–08–2010ರ ಪತ್ರದಲ್ಲಿ ಕೋರಿರುತ್ತಾರೆ.

ರಾಷ್ಟ್ರೀಯ ಜಲನೀತಿಯಂತೆ ಕುಡಿಯುವ ನೀರು ಬಳಕೆಗೆ ಆದ್ಯತೆ ನೀಡುವ ಅವಶ್ಯಕತೆ ಇರುವುದರಿಂದ ಮುಖ್ಯ ಇಂಜಿನಿಯರ್ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 39 ಕೆಜಿದು 2010, ಬೆಂಗಳೂರು, ದಿನಾಂಕ: 22–11–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಹಾವೇರಿ ಜಿಲ್ಲೆ ಶಿಗ್ಗಾಂವ ಮತ್ತು ಸವಣೂರು ಹಾಗೂ ಬಂಕಾಪುರ ಪಟ್ಟಣಗಳಿಗೆ ಸಣ್ಣ ಮತ್ತು ಮಧ್ಯಮ ನಗರ/ಪಟ್ಟಣಗಳ ಮೂಲ ಸೌಕರ್ಯ ಅಭಿವೃದ್ಧಿ ಯೋಜನೆಯಡಿಯಲ್ಲಿ ಕುಡಿಯುವ ನೀರು ಪೂರೈಸಲು ಮೋತಿತಲಾಬ್ ಕೆರೆ ಹಾಗೂ ತೆವರಮಳ್ಳಿಹಳ್ಳಿ ಸಣ್ಣ ನೀರಾವರಿ ಕೆರೆಗಳನ್ನು ಕುಡಿಯುವ ನೀರು ಬಳಸಿಕೊಳ್ಳಲು ಕಾರ್ಯಪಾಲಕ ಇಂಜಿನಿಯರ್, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವಿಭಾಗ, ಗದಗ್ ಇವರಿಗೆ ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಅನುಮತಿ ನೀಡಿದೆ.

1) ಕೆರೆಯಲ್ಲಿ ಕನಿಷ್ಠ ಮಟ್ಟದವರೆಗೆ ನೀರು ಶೇಖರಣೆಯಾಗುವವರೆಗೂ ಕೆರೆಯಿಂದ ನೀರನ್ನು ಬಳಸಬಾರದು.
2) ಹಾವೇರಿ ಜಿಲ್ಲೆ, ಸವಣೂರು ತಾಲ್ಲೂಕಿನ ತೆವರಮಳ್ಳಿಹಳ್ಳಿ ಕೆರೆ ಹಾಗೂ ಮೋತಿತಲಾಬ ಕೆರೆಯ ನೀರನ್ನು ಕುಡಿಯುವ ನೀರಿಗೆ ಉಪಯೋಗಿಸಿಕೊಳ್ಳುವ ಸಲುವಾಗಿ ನೀರಿನ ಪ್ರಮಾಣವನ್ನು ಅಳತೆ ಮಾಡಿ ಒಂದು ರಿಜಿಸ್ಟರ್‌ನಲ್ಲಿ ದಾಖಲಿಸುವುದು ಇದನ್ನು ಸಣ್ಣ ನೀರಾವರಿ ಇಲಾಖೆಯ ಅಧಿಕಾರಿಗಳು ಕಾಲಕಾಲಕ್ಕೆ ಪರಿಶೀಲಿಸಿ ಮೇಲು ಸಹಿ ಮಾಡುವುದು.
3) ನೀರು ಸರಬರಾಜು ಯೋಜನೆಯ ನೀಲಿ ನಕಾಶೆಯನ್ನು ಪಡೆದು ಸಣ್ಣ ನೀರಾವರಿ ಇಲಾಖೆಯಲ್ಲಿ ದಾಖಲಿಸುವುದು.
4) ಮೇಲೆ ತಿಳಿಸಿರುವ ಎಲ್ಲಾ ನಿಬಂಧನೆಗಳನ್ನೊಳಗೊಂಡ ಒಂದು ತಿಳುವಳಿಕೆ ಪತ್ರವನ್ನು ತಯಾರಿಸಿ ಅದಕ್ಕೆ ಸಂಬಂಧಪಟ್ಟ ಕಾರ್ಯಪಾಲಕ ಇಂಜಿನಿಯರ್, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವಿಭಾಗ, ಗದಗ್ ಮತ್ತು ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಧಾರವಾಡರವರು ಜಂಟಿ ಸಹಿ ಮಾಡಿ ಅದರ ಮೂಲ ಪ್ರತಿಯನ್ನು ಸಣ್ಣ ನೀರಾವರಿ ಇಲಾಖೆಯಲ್ಲಿ ದಾಖಲಿಸುವುದು.
5) ಕೆರೆಯ ವಾರ್ಷಿಕ ನಿರ್ವಹಣೆ ತಗಲುವ ಶೇ. 25ರಷ್ಟು ವೆಚ್ಚವನ್ನು ಕಾರ್ಯಪಾಲಕ ಇಂಜಿನಿಯರ್ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವಿಭಾಗವು ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಪಿ.ಆರ್. 2844

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## COMMERCE AND INDUSTRIES SECRETARIAT

**Sub:** The Project Proposal of M/s Atlas Power India Pvt. Ltd., to establish “2x660 MW Coal Based Power Plant” at Gulbarga District-amendments-reg.

**Ref:**
1. Proceedings of the 14th State High Level Clearance Committee (SHLCC) meeting held on 17-03-2008.
2. Govt. Order No. CI 36 SPI 2008, dated: 23-11-2009.
3. Corrigendum No. CI 36 SPI 2008, dated: 16-02-2010.
4. Letter from General Manager, Atlas Power India Pvt. Ltd., dated: 23-10-2010.

Preamble:

Approval for the project proposal of M/s Atlas Power India Pvt. Ltd., has been accorded vide G.O. referred at (2) above. Then the change of location of the project from Sanwar, Ankur, Belgunda and Heggangere Village to Kadechur Village Yadagiri Taluk, Gulbarga District has been permitted in the corrigendum referred at (3) above.

As per the Government Order referred at (2) above, “the company was permitted to buy land directly from the land owners with permission U/s 109 of KLR Act”. But the land identified by the company at Kadechur Village could not be purchased by the company, as the land is being acquired by KIADB. The Company in its letter read at (4) above has requested to direct KIADB to acquire land of 952 acres required by the company.

The Government has examined the proposal in detail and hence the following order.

**Government Order No. CI 36 SPI 2008, Bangalore Dated: 19-11-2010**

For the reasons explained above, approval of the Government is hereby accorded to acquire 952 acres of land, required by the company to establish 2 x 660 MW coal Based Power Plant at Kadechur Village through KIADB.

Other terms and conditions of G.O read at (2) remain the same.

By Order and in the name of the Governor of Karnataka

**A.V. Srinivasa Dikshit**

PR No. 2845

Desk Officer (Technical Cell)

Commerce & Industries Department

## PERSONNEL AND ADMINISTRATIVE REFORMS SECRETARIAT

**Sub:** Sanction of Medical Expenses to the retired Chief Justices and Judges of the High Court of Karnataka.

**Read:** 1. G.O No. DPAR 84 SHC 2004, Dated: 15-10-2004.

2. Letter No. RPS 71/2002, Dated: 7-7-2010 received from the Registrar General, High Court of Karnataka, Bangalore.

Preamble:

In the Government Order read at (1) above, Government have sanctioned the following facilities to the retired Chief Justices and Judges of the High Court of Karnataka subject to certain conditions.

| Reimbursement of | High Court Judges (Retired) | Chief Justice (Retired) |
|---|---|---|
| Servant Allowance | Rs. 2,500/- P.M. | Rs. 3,000/- P.M. |
| Telephone Charges | Rs. 1,000/- P.M. | Rs. 1,500/- P.M. |
| Medical expenses | Rs. 10,000/- P.A. | Rs. 15,000/- P.A. |

The Registrar General, High Court of Karnataka in his letter read at (2) above, has stated, that some of the retired Hon'ble Judges have requested the Registry of High Court of Karnataka to request the Government for reimbursement of Medical claims on par with the sitting Judges of the High Court of Karnataka, in view of increase in the cost of medical expenses. Further it is stated that some of the Hon'ble Judges who have been initially appointed as Judges of High Court of Karnataka, later transferred to other High Courts and retired there itself are getting higher benefits from those States resulting in discrimination. The Registrar General has therefore requested the Government to consider issue of orders for reimbursement of medical expenses incurred by the retired Chief Justices and Judges of the High Court of Karnataka on par with the sitting Hon'ble Judges of High Court of Karnataka.

The State Government have examined this proposal and the following order is issued.

**Government Order No. DPAR 40 Se Vu Nya 2010, Bangalore Dated: 20-11-2010**

Government in partial modification of G.O. No. DPAR 84 SHC 2004, Dated: 15-10-2004, are pleased to order enhancement of medical expenses to retired Chief Justices and Judges of the High Court of Karnataka as hereunder;

1) Retired Chief Justices - Rs. 30,000/- P.A.
2) Retired Judges - Rs. 20,000/- P.A.

**Provided that:**

a) The Chief Justices and Judges have retired from the Karnataka High Court and staying any where in the country:-
b) The Chief Justices and Judges are not practicing as Senior Advocates;
c) They are not engaged or re-employed in any Government Assignments/Arbitrators;
d) The Reimbursement of medical expenses shall be covered by the Karnataka Ministers, Minister of State and Deputy Ministers Medical Attendance Rules, 1958 as applicable to the sitting Chief Justice/Judges of the High Court of Karnataka.

The Registrar General, High Court of Karnataka shall be the drawing and disbursing Officer in respect of the above expenditure preferred by the retired Chief Justices and Judges of the High Court of Karnataka.

The expenditure in this regard is debitable to the head of account "2014-00-102-0-01 High Court Judges".

This order issues with the concurrence of Finance Department vide its Note No. FD 1187 Ser-1/2010, Dated: 28-10-2010.

By Order and in the name of the Governor of Karnataka

**A.R. Vijayananda Sharma**

Under Secretary to Government

D.P.A.R. (Services-3).

PR No. 2846

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಕೆ. ವಿಶ್ವನಾಥ, ಪಿ.ಎಸ್.ಐ. ಬನ್ನೇರುಘಟ್ಟ ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು. ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ: ಪನ್ನಿ/11/ಡಿಇ/2009 ಓ.ಬಿ. ಸಂ. 69/09-10 ದಿನಾಂಕ: 24-8-09.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು (4)59/2009-10 ಓ.ಬಿ. 65/2009-10 ದಿನಾಂಕ: 05-03-2010.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 15-05-2010.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)19/2010-11 ದಿನಾಂಕ: 07-07-2010.

5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 138 ಸಿಎನ್‌ಎಸ್ 10 ದಿನಾಂಕ: 25–10–2010.

**ಪ್ರಸ್ತಾವನೆ:**

ಶ್ರೀ ಕೆ. ವಿಶ್ವನಾಥ, ಪಿ.ಎಸ್.ಐ., ಬನ್ನೇರುಘಟ್ಟ ಪೊಲೀಸ್ ಠಾಣೆ, ಇವರು ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ:**

1) ಚಿಕ್ಕಬಳ್ಳಾಪುರ ಜಿಲ್ಲೆಯ ಗೌರಿಬಿದನೂರು ತಾಲ್ಲೂಕು, ಚಿಕ್ಕಕುರುಗೋಡು ವಾಸಿಯಾದ ಡಾ: ಲಕ್ಷ್ಮೀದೇವಿ ಎಲ್. ರವರು ದಿನಾಂಕ: 16–07–2008 ರಂದು ಚಿಕ್ಕಬಳ್ಳಾಪುರ ಪೊಲೀಸ್ ಅಧೀಕ್ಷಕರಿಗೆ ಸಲ್ಲಿಸಲಾಗಿರುವ ಅರ್ಜಿಯಲ್ಲಿ ಗ್ರಾಮಾಂತರ ಪೊಲೀಸ್ ಠಾಣೆ ಸಿ.ಸಿ. ನಂ. 152/2003ರ ಪ್ರಕರಣಕ್ಕೆ ಸಂಬಂಧಿಸಿದಂತೆ ಅಮಾನತ್ತು ಪಡಿಸಿಕೊಂಡಿರುವ ಮೂಲ ದಾಖಲೆಗಳನ್ನು ಒದಗಿಸಬೇಕೆಂದು ಕೋರಿದ್ದು, ಪ್ರಕರಣದ ತನಿಖಾಧಿಕಾರಿಯಾಗಿದ್ದ ಆ.ಪೊ. ಆದ ನೀವು ಪ್ರಕರಣದ ಮೂಲ ದಾಖಲೆಗಳನ್ನು ನ್ಯಾಯಾಲಯಕ್ಕೆ ದೋಷಾರೋಪಣೆ ಪಟ್ಟಿಯೊಂದಿಗೆ ಸಲ್ಲಿಸಿರುವುದಾಗಿ ತಿಳಿಸಿ ನ್ಯಾಯಾಲಯಕ್ಕೆ ಯಾವುದೇ ದಾಖಲೆಗಳನ್ನು ಸಲ್ಲಿಸಿರುವುದಿಲ್ಲ. ದಾಖಲೆಗಳನ್ನು ಅರ್ಜಿದಾರರಿಗೆ ನೀಡುವ ಬಗ್ಗೆ ವರದಿ ಸಲ್ಲಿಸಿರುತ್ತಾರೆ.

2) ಪ್ರಧಾನ ಕಛೇರಿಯ ದಿನಾಂಕ: 21–7–2008ರ ಪತ್ರದಲ್ಲಿ ಅರ್ಜಿದಾರರಾದ ಡಾ: ಲಕ್ಷ್ಮೀದೇವಿರವರಿಗೆ ಸಂಬಂಧಿಸಿದ ಮೂಲ ದಾಖಲಾತಿಗಳನ್ನು ಪತ್ತೆ ಹಚ್ಚಿ ಅರ್ಜಿದಾರರಿಗೆ ವಾಪಸು ನೀಡಲು ಸೂಚಿಸಿದ್ದು, ಅದರಂತೆ ಸಿ.ಪಿ.ಐ., ಗೌರಿಬಿದನೂರು ವೃತ್ತರವರು ಪ್ರಕರಣದ ತನಿಖಾಧಿಕಾರಿಯಾಗಿದ್ದ ನೀವು ದೋಷಾರೋಪಣೆಯನ್ನು ನ್ಯಾಯಾಲಯಕ್ಕೆ ಸಲ್ಲಿಸುವಾಗ ಮೂಲ ದಾಖಲಾತಿಗಳನ್ನು ಸಲ್ಲಿಸಿಕೊಂಡಿರುವುದಿಲ್ಲವೆಂದು ಅವುಗಳು ಕಾಣೆಯಾಗಿರುವುದಾಗಿ ಪೊಲೀಸ್ ಅಧೀಕ್ಷಕರು, ಚಿಕ್ಕಬಳ್ಳಾಪುರರವರಿಗೆ ಸಲ್ಲಿಸಲಾದ ಇವರ ವರದಿಯಿಂದ ಕಂಡು ಬಂದಿರುತ್ತದೆ.

3) ನೀವು ಅರ್ಜಿದಾರರಿಗೆ ಮೂಲ ದಾಖಲಾತಿಗಳನ್ನು ಪತ್ತೆ ಹಚ್ಚಿ ಸಂಬಂಧಪಟ್ಟವರಿಗೆ ಒಪ್ಪಿಸುವಂತೆ ಎರಡು ಬಾರಿ ಪೊಲೀಸ್ ಅಧೀಕ್ಷಕರು, ಬೆಂಗಳೂರು ಜಿಲ್ಲೆರವರ ಮುಖಾಂತರ ನಿಮಗೆ ತಿಳಿಸಿದ್ದರೂ ಸಹ ದಾಖಲಾತಿಗಳನ್ನು ಹುಡುಕಿಕೊಡಲು ನೀವು ಯಾವುದೇ ಕ್ರಮ ಜರುಗಿಸಿರುವುದಿಲ್ಲ. ಮೂಲ ದಾಖಲಾತಿಗಳು ಇಲ್ಲದಿರುವುದು ಕಂಡುಬಂದಿರುವುದರಿಂದ ದಾಖಲೆಗಳನ್ನು ಹುಡುಕಿಕೊಡಲು ತಿಳಿಸಿದ್ದರೂ ಬೇಜವಾಬ್ದಾರಿತನದಿಂದ ವರ್ತಿಸಿರುವುದರ ಬಗ್ಗೆ ಸಲ್ಲಿಸಿದ್ದ ವರದಿಗಳಲ್ಲಿ ಆರೋಪಗಳಿರುವುದು ಕಂಡು ಬಂದಿರುತ್ತದೆ. ಠಾಣೆಯ ದಾಖಲಾತಿಗಳು ಹಳೆಯ ಪೊಲೀಸ್ ಠಾಣೆಯಿಂದ ಹೊಸ ಪೊಲೀಸ್ ಠಾಣೆಗೆ ತರುವಾಗ ಎಲ್ಲಿಯೋ ಸ್ಥಳಾಂತರವಾಗಿರುತ್ತದೆಂದು, ಈ ಕಾರಣಕ್ಕಾಗಿ ಜೆರಾಕ್ಸ್ ಪ್ರತಿಗಳನ್ನು ಲಗತ್ತಿಸಿರುವುದಾಗಿ ಬೇಜವಾಬ್ದಾರಿತನದ ಉತ್ತರವನ್ನು ನೀಡಿರುವುದು ಅರ್ಜಿದಾರರ ಕೋರಿಕೆ ಬಗ್ಗೆ ಕರ್ನಾಟಕ ಮಾಹಿತಿ ಆಯೋಗವು ದಿನಾಂಕ: 05–01–2009ರ ಪತ್ರದಲ್ಲಿ ಕರ್ನಾಟಕ ಅಧಿನಿಯಮ 2005ರ ಕಲಂ 20(1)ರ ಅಡಿಯಲ್ಲಿ ಕ್ರಮ ಜರುಗಿಸುವ ಬಗ್ಗೆ ಅವಶ್ಯಕ ದಾಖಲಾತಿಗಳೊಂದಿಗೆ ಆಯೋಗಕ್ಕೆ ಹಾಜರಾಗಬೇಕೆಂದು ಸೂಚಿಸಿರುತ್ತಾರೆ. ಅರ್ಜಿದಾರರು ಮೂಲ ದಾಖಲಾತಿಗಳನ್ನು ಸುರಕ್ಷಿತವಾಗಿ ಠಾಣೆಯಲ್ಲಿ ಇಟ್ಟುಕೊಳ್ಳದಿರುವುದು, ದೋಷಾರೋಪಣಾ ಪತ್ರ ಸಲ್ಲಿಸುವಾಗ ನ್ಯಾಯಾಲಯಕ್ಕೂ ಹಾಜರುಪಡಿಸಿರುವುದಾಗಿ ಮತ್ತು ಎಲ್ಲಿಯೋ ಸ್ಥಳಾಂತರವಾಗಿರುತ್ತದೆಂದು ಬೇಜವಾಬ್ದಾರಿತನದ ಹೇಳಿಕೆ ನೀಡಿ, ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ಮತ್ತು ಬೇಜವಾಬ್ದಾರಿತನ ತೋರಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 24–08–2009ರ ಆದೇಶದಲ್ಲಿ ಅರ್ಜಿದಾರರ ಎರಡು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಎರಡು ವರ್ಷಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 05–03–10ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಿಧಿಸಿದ ದಂಡನೆಯು ಆರೋಪಕ್ಕನುಗುಣವಾಗಿಲ್ಲವೆಂದು ಪರಿಗಣಿಸಿ, ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 75 ಪೊಸಿಅ 2010 ಬೆಂಗಳೂರು, ದಿನಾಂಕ: 16–11–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಕೆ. ವಿಶ್ವನಾಥ, ಪಿ.ಎಸ್.ಐ., ಬನ್ನೇರುಘಟ್ಟ ಪೊಲೀಸ್ ಠಾಣೆ, ಬೆಂಗಳೂರು ಜಿಲ್ಲೆ, ಇವರಿಗೆ ಶಿಸ್ತು ಪ್ರಾಧಿಕಾರವು 24–08–2009ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಭಾಗಶಃ ಮಾರ್ಪಡಿಸಿ 'ವಾಗ್ದಂಡನೆ' ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2847

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ** : ಅಯೋಧ್ಯಾ–ಬಾಬರಿ ಮಸೀದಿ ವಿವಾದ ಕುರಿತು ಅಲಹಾಬಾದ್‌ನ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ 30–09–2010 ರಂದು ತೀರ್ಪು ನೀಡಲಿದೆ ಎಂದು ಮುಂಚಿತವಾಗಿಯೇ ಪ್ರಕಟಗೊಂಡ ಹಿನ್ನೆಲೆಯಲ್ಲಿ ಕೊಡಗು ಜಿಲ್ಲಾ ದಂಡಾಧಿಕಾರಿಗಳು ಕೊಡಗು ಜಿಲ್ಲೆಯಲ್ಲಿನ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡುವ ದೃಷ್ಟಿಯಿಂದ ಕೊಡಗು ಜಿಲ್ಲೆಗೆ 12 ಜನ ವಿಶೇಷ ಕಾರ್ಯನಿರ್ವಾಹಕ ದಂಡಾಧಿಕಾರಿಗಳನ್ನು ನೇಮಿಸಿ ಹೊರಡಿಸಿದ್ದ ಅಧಿಸೂಚನೆಗೆ ಸರ್ಕಾರದ ಘಟನೋತ್ತರ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ** : ಜಿಲ್ಲಾ ದಂಡಾಧಿಕಾರಿಗಳು, ಕೊಡಗು ಜಿಲ್ಲೆ ರವರ ಪತ್ರ ಸಂಖ್ಯೆ: ಎಂಎಜಿ/108/2010–11, ದಿನಾಂಕ 29–09–2010.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ, ಕೊಡಗು ಜಿಲ್ಲಾದಂಡಾಧಿಕಾರಿಗಳು ಅಯೋಧ್ಯಾ–ಬಾಬರಿ ಮಸೀದಿ ವಿವಾದ ಕುರಿತು ದಿನಾಂಕ 30–09–2010ರಂದು ಅಲಹಾಬಾದ್‌ನ ಮಾನ್ಯ ಉಚ್ಚನ್ಯಾಯಾಲಯವು ತೀರ್ಪು ನೀಡಲಿದ್ದು, ಇದೊಂದು ಭಾವನಾತ್ಮಕ ಹಾಗೂ ಧಾರ್ಮಿಕ ವಿಷಯವಾಗಿರುವುದರಿಂದ ಇಂತಹ ಸಮಯದಲ್ಲಿ ಯಾವುದೇ ರೀತಿಯ ಅಹಿತಕರ ಘಟನೆಗಳು ನಡೆದು, ಸಾರ್ವಜನಿಕ ಆಸ್ತಿಪಾಸ್ತಿಗಳಿಗೆ ನಷ್ಟ ಉಂಟಾಗದಂತೆ ಕಟ್ಟುನಿಟ್ಟಿನ ಬಂದೋಬಸ್ತ್ ವ್ಯವಸ್ಥೆ ಮಾಡಬೇಕಾಗಿರುವುದರಿಂದ ಸರ್ಕಾರದ ಅನುಮೋದನೆಯನ್ನು ಕಾಯ್ದಿರಿಸಿ, ಭಾರತೀಯ ದಂಡ ಪ್ರಕ್ರಿಯಾ ಸಂಹಿತೆ 1974ರ (ಕೇಂದ್ರ ಕಾಯ್ದೆ ಕಲಂ 21)ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ದಿನಾಂಕ 30–09–2010 ರಿಂದ 06–10–2010ರವರೆಗೆ ತುರ್ತಾಗಿ ಕೊಡಗು ಜಿಲ್ಲೆಯಾದ್ಯಂತ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡುವ ಸಲುವಾಗಿ ಒಟ್ಟು 12 ಜನ ಅಧಿಕಾರಿಗಳನ್ನು ವಿಶೇಷ ಕಾರ್ಯನಿರ್ವಾಹಕ ದಂಡಾಧಿಕಾರಿಗಳನ್ನಾಗಿ ನೇಮಿಸಿದ ಅಧಿಸೂಚನೆಯನ್ನು ಹೊರಡಿಸಿ, ತದನಂತರ ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಸರ್ಕಾರವು ಪರಿಶೀಲಿಸಿದೆ. ಅಯೋಧ್ಯ–ಬಾಬರಿ ಮಸೀದಿಗಳಂತಹ ವಿಷಯಗಳು ಸೂಕ್ಷ್ಮಾತಿ–ಸೂಕ್ಷ್ಮ ವಿಷಯಗಳಾಗಿದ್ದು, ಇಂತಹ ವಿಷಯದಲ್ಲಿ ಕೊಡಗು ಜಿಲ್ಲಾಧಿಕಾರಿಗಳು ತೆಗೆದುಕೊಂಡಿರುವ ಕ್ರಮವು ಯಥೋಚಿತ ಹಾಗೂ ಕ್ರಮಬದ್ಧವಾಗಿರುವುದನ್ನು ಮನಗಂಡ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 465 ಎಸ್‌ಎಸ್‌ಟಿ 2010, ಬೆಂಗಳೂರು, ದಿನಾಂಕ: 01–10–2010**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಅಯೋಧ್ಯೆ–ಬಾಬರಿ ಮಸೀದಿ ವಿವಾದ ಕುರಿತು ಅಲಹಾಬಾದ್‌ನ ಮಾನ್ಯ ಉಚ್ಚನ್ಯಾಯಾಲಯದ ತೀರ್ಪು ದಿನಾಂಕ 30–09–2010 ಎಂದು ಈ ಮೊದಲೇ ಪೂರ್ವಭಾವಿಯಾಗಿ ನಿಗದಿಪಡಿಸಿದ್ದ ಕಾರಣ, ತುರ್ತಾಗಿ ಕೊಡಗು ಜಿಲ್ಲೆಯಾದ್ಯಂತ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡುವ ದೃಷ್ಟಿಯಿಂದ ಜಿಲ್ಲಾದಂಡಾಧಿಕಾರಿಗಳು, ಕೊಡಗು ಜಿಲ್ಲೆ, ಕೊಡಗು, ಇವರು ಸರ್ಕಾರದ ಅನುಮೋದನೆಯನ್ನು ಕಾಯ್ದಿರಿಸಿ ದಿನಾಂಕ 30–09–2010 ರಿಂದ 06–10–2010ರ ವರೆಗೆ ಕೊಡಗು ಜಿಲ್ಲೆಯಾದ್ಯಂತ 12 ಜನ ವಿಶೇಷ ಕಾರ್ಯನಿರ್ವಾಹಕ ದಂಡಾಧಿಕಾರಿಗಳನ್ನು ನೇಮಿಸಿ ಹೊರಡಿಸಿದ್ದ ದಿನಾಂಕ 29–09–2010ರ ಅಧಿಸೂಚನೆ ಸಂಖ್ಯೆ: ಎಂಎಜಿ/108/2010–11ಕ್ಕೆ (ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧವೂ ಸೇರಿದಂತೆ) ಸರ್ಕಾರವು ಘಟನೋತ್ತರ ಅನುಮೋದನೆಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

## ಅನುಬಂಧ

ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 465 ಎಸ್‌ಎಸ್‌ಟಿ 2010, ಬೆಂಗಳೂರು, ದಿನಾಂಕ 01–10–2010

| ಕ್ರ. ಸಂ. | ಅಧಿಕಾರ ವ್ಯಾಪ್ತಿಯ ಪ್ರದೇಶ | ವಿಶೇಷ ಕಾರ್ಯನಿರ್ವಾಹಕ ದಂಡಾಧಿಕಾರಿಯಾಗಿ ನೇಮಕಗೊಂಡ ಅಧಿಕಾರಿಯ ಪದನಾಮ | ಕೇಂದ್ರ ಕಾರ್ಯಸ್ಥಾನ |
|---|---|---|---|
| 1 | 2 | 3 | 4 |
| 1 | ಮಡಿಕೇರಿ ಗ್ರಾಮಾಂತರ ಪೊಲೀಸ್ ಠಾಣಾ ವ್ಯಾಪ್ತಿ | ಶ್ರೀ ಕೇಶವಮೂರ್ತಿ, ಕಾರ್ಯನಿರ್ವಾಹಕ ಇಂಜಿನಿಯರ್ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಮಡಿಕೇರಿ | ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ ಕಚೇರಿ, ಮಡಿಕೇರಿ |
| 2 | ಆರಕ್ಷಣಾ ಠಾಣಾ ವ್ಯಾಪ್ತಿ, ನಾಪೋಕ್ಲು | ಶ್ರೀ ರಾಜೇಶ್ ಗೌಡ, ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ, ಕೊಡಗು ಜಿಲ್ಲೆ, ಮಡಿಕೇರಿ | ಉಪತಹಶೀಲ್ದಾರರ ಕಚೇರಿ, ನಾಪೋಕ್ಲು |
| 3 | ಆರಕ್ಷಕ ಠಾಣಾ ವ್ಯಾಪ್ತಿ, ಭಾಗಮಂಡಲ | ಶ್ರೀ ಚಿನ್ನಪ್ಪ, ಜಿಲ್ಲಾ ಅಧಿಕಾರಿ, ಹಿಂದುಳಿದ ಮತ್ತು ಅಲ್ಪ ಸಂಖ್ಯಾತರ ಇಲಾಖೆ | ಉಪತಹಶೀಲ್ದಾರರ ಕಚೇರಿ, ಭಾಗಮಂಡಲ |
| 4 | ಕುಶಾಲನಗರ ಪೊಲೀಸ್ ಠಾಣಾ ವ್ಯಾಪ್ತಿ | ಶ್ರೀ ರಾಜಾ ಸುರೇಂದ್ರ ಮುಖ್ಯ ಲೆಕ್ಕಾಧಿಕಾರಿ, ಕೊಡಗು ಜಿಲ್ಲಾ ಪಂಚಾಯತ್, ಮಡಿಕೇರಿ | ನಾಡ ಕಚೇರಿ, ಕುಶಾಲನಗರ |
| 5 | ಆರಕ್ಷಕ ಠಾಣಾ ವ್ಯಾಪ್ತಿ, ಸುಂಟಿಕೊಪ್ಪ | ಶ್ರೀ ದೇವದಾಸ್, ಜಂಟಿ ನಿರ್ದೇಶಕರು, ಕೃಷಿ ಇಲಾಖೆ, ಮಡಿಕೇರಿ | ಕಂದಾಯ ಪರಿವೀಕ್ಷಕರ ಕಚೇರಿ, ಸುಂಟಿಕೊಪ್ಪ |

| | | | |
|---|---|---|---|
| 6 | ಗ್ರಾಮಾಂತರ ಪೊಲೀಸ್ ಠಾಣೆ, ವಿರಾಜಪೇಟೆ | ಶ್ರೀ ಮಚಾಡೋ ನೋಡಲ್ ಅಧಿಕಾರಿ, ಅಕ್ಷರ ದಾಸೋಹ, ಮಡಿಕೇರಿ | ಕಂದಾಯ ಪರಿವೀಕ್ಷಕರ ಕಚೇರಿ, ವಿರಾಜಪೇಟೆ |
| 7 | ಆರಕ್ಷಕ ಠಾಣಾ ವ್ಯಾಪ್ತಿ, ಶ್ರೀಮಂಗಲ | ಶ್ರೀ ವಿ. ಪ್ರಸನ್ನ ಕುಮಾರ್, ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಮತ್ತು ಪದನಿಮಿತ್ತ ಭೂದಾಖಲೆಗಳ ಉಪನಿರ್ದೇಶಕರು, ಕೊಡಗು ಜಿಲ್ಲೆ, ಮಡಿಕೇರಿ | ನಾಡ ಕಚೇರಿ, ಶ್ರೀಮಂಗಲ |
| 8 | ಆರಕ್ಷಕ ಠಾಣಾ ವ್ಯಾಪ್ತಿ, ಕುಟ್ಟ | ಶ್ರೀ ಅಲೆಗ್ಸಾಂಡರ್, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ವಿರಾಜಪೇಟೆ | ಗ್ರಾಮ ಪಂಚಾಯತಿ ಕಚೇರಿ, ಕುಟ್ಟ |
| 9 | ಆರಕ್ಷಕ ಠಾಣಾ ವ್ಯಾಪ್ತಿ, ಪೊನ್ನಂಪೇಟೆ | ಶ್ರೀ ಮೋಟಪ್ಪ, ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಮಡಿಕೇರಿ | ನಾಡ ಕಚೇರಿ, ಪೊನ್ನಂಪೇಟೆ |
| 10 | ಆರಕ್ಷಕ ಠಾಣಾ ವ್ಯಾಪ್ತಿ, ಶನಿವಾರಸಂತೆ | ಶ್ರೀ ಶಿವಣ್ಣ, ಕ್ಷೇತ್ರ ಶಿಕ್ಷಣಾಧಿಕಾರಿ, ಸೋಮವಾರಪೇಟೆ | ನಾಡ ಕಚೇರಿ, ಶನಿವಾರಸಂತೆ |
| 11 | ಆರಕ್ಷಕ ಠಾಣಾ ವ್ಯಾಪ್ತಿ, ಗೋಣಿಕೊಪ್ಪ | ಶ್ರೀ ಮರಿಸ್ವಾಮಿ, ಕ್ಷೇತ್ರ ಶಿಕ್ಷಣಾಧಿಕಾರಿ, ಮಡಿಕೇರಿ | ಗ್ರಾಮ ಪಂಚಾಯತಿ ಕಚೇರಿ, ಗೋಣಿಕೊಪ್ಪ |
| 12 | ಆರಕ್ಷಕ ಠಾಣಾ ವ್ಯಾಪ್ತಿ, ಸಿದ್ಧಾಪುರ | ಶ್ರೀ ಎಸ್. ವೈ. ಬಸವರಾಜಪ್ಪ, ಉಪ ಕಾರ್ಯದರ್ಶಿ, ಕೊಡಗು ಜಿಲ್ಲಾ ಪಂಚಾಯತ್, ಮಡಿಕೇರಿ | ಗ್ರಾಮ ಪಂಚಾಯತಿ ಕಚೇರಿ, ಸಿದ್ದಾಪುರ |

**ಕೆ. ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾಫಿಪೋಸಾ, ಅಭಿಯೋಗ ಹಾಗೂ ಕಾನೂನು ಮತ್ತು ಸುವ್ಯವಸ್ಥೆ)

ಪಿ.ಆರ್. 2884

## ಒಳಾಡಳಿತ ಸಚಿವಾಲಯ

**ವಿಷಯ** : ಅಯೋಧ್ಯೆ–ಬಾಬರಿ ಮಸೀದಿ ವಿವಾದ ಕುರಿತು ಅಲಹಾಬಾದ್‌ನ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ 30–09–2010 ರಂದು ತೀರ್ಪು ನೀಡಲಿದೆ ಎಂದು ಮುಂಚಿತವಾಗಿಯೇ ಪ್ರಕಟಗೊಂಡ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲಾದಂಡಾಧಿಕಾರಿಗಳು ಮಂಗಳೂರು ಇವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡುವ ದೃಷ್ಟಿಯಿಂದ ಜಿಲ್ಲೆಗೆ 10 ಜನ ವಿಶೇಷ ಕಾರ್ಯನಿರ್ವಾಹಕ ದಂಡಾಧಿಕಾರಿಗಳನ್ನು ನೇಮಿಸಿ ಹೊರಡಿಸಿದ್ದ ಅಧಿಸೂಚನೆಗೆ ಸರ್ಕಾರದ ಘಟನೋತ್ತರ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ** : ಜಿಲ್ಲಾದಂಡಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ರವರ ಪತ್ರ ಸಂಖ್ಯೆ: ಎಂಎಜಿ (2) ಸಿಆರ್. 503/2010–11/35544/ಸಿ4, ದಿನಾಂಕ 29–09–2010.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ, ಜಿಲ್ಲಾದಂಡಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ರವರು ಅಯೋಧ್ಯೆ–ಬಾಬರಿ ಮಸೀದಿ ವಿವಾದ ಕುರಿತು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ದಿನಾಂಕ 30–09–2010ರಂದು ಅಲಹಾಬಾದ್‌ನ ಮಾನ್ಯ ಉಚ್ಚನ್ಯಾಯಾಲಯದ ತ್ರಿಸದಸ್ಯ ಪೀಠವು ತೀರ್ಪು ನೀಡಲಿರುವುದರ ಬಗ್ಗೆ ಪ್ರಸ್ತಾಪಿಸುತ್ತ ಇದೊಂದು ಭಾವನಾತ್ಮಕ ಹಾಗೂ ಧಾರ್ಮಿಕ ವಿಷಯವಾಗಿರುವುದರಿಂದ ಇಂತಹ ಸಮಯದಲ್ಲಿ ಯಾವುದೇ ರೀತಿಯ ಅಹಿತಕರ ಘಟನೆಗಳು ನಡೆದು, ಸಾರ್ವಜನಿಕ ಆಸ್ತಿಪಾಸ್ತಿಗಳಿಗೆ ನಷ್ಟ ಉಂಟಾಗದಂತೆ ಕಟ್ಟುನಿಟ್ಟಿನ ಬಂದೋಬಸ್ತ್ ವ್ಯವಸ್ಥೆ ಮಾಡಬೇಕಾಗಿರುವುದರಿಂದ ಸರ್ಕಾರದ ಅನುಮೋದನೆಯನ್ನು ಕಾಯ್ದಿರಿಸಿ, ಭಾರತೀಯ ದಂಡ ಪ್ರಕ್ರಿಯಾ ಸಂಹಿತೆ 1974ರ (ಕೇಂದ್ರ ಕಾಯ್ದೆ ಕಲಂ 21,22)ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ದಿನಾಂಕ 30–09–2010 ರಿಂದ 06–10–2010ರವರೆಗೆ ತುರ್ತಾಗಿ ದಕ್ಷಿಣ ಕನ್ನಡ ಜಿಲ್ಲೆಯಾದ್ಯಂತ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡುವ ಸಲುವಾಗಿ ಒಟ್ಟು 10 ಜನ ಅಧಿಕಾರಿಗಳನ್ನು ವಿಶೇಷ ಕಾರ್ಯನಿರ್ವಾಹಕ ದಂಡಾಧಿಕಾರಿಗಳನ್ನಾಗಿ ನೇಮಿಸಿದ ಅಧಿಸೂಚನೆಯನ್ನು ಹೊರಡಿಸಿ, ತದನಂತರ ಸರ್ಕಾರದಿಂದ ಘಟನೋತ್ತರ ಅನುಮೋದನೆಯನ್ನು ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಸರ್ಕಾರವು ಪರಿಶೀಲಿಸಿದೆ. ಅಯೋಧ್ಯ–ಬಾಬರಿ ಮಸೀದಿಗಳಂತಹ ವಿಷಯಗಳು ಸೂಕ್ಷ್ಮಾತಿ–ಸೂಕ್ಷ್ಮ ವಿಷಯಗಳಾಗಿದ್ದು, ಇಂತಹ ವಿಷಯದಲ್ಲಿ ದಕ್ಷಿಣ ಕನ್ನಡ ಜಿಲ್ಲಾದಂಡಾಧಿಕಾರಿಗಳು ತೆಗೆದುಕೊಂಡಿರುವ ಕ್ರಮವು ಯಥೋಚಿತ ಹಾಗೂ ಕ್ರಮಬದ್ಧವಾಗಿರುವುದನ್ನು ಸರ್ಕಾರವು ಮನಗಂಡಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 461 ಎಸ್‌ಎಸ್‌ಟಿ 2010, ಬೆಂಗಳೂರು, ದಿನಾಂಕ: 01–10–2010**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಅಯೋಧ್ಯೆ–ಬಾಬರಿ ಮಸೀದಿ ವಿವಾದ ಕುರಿತು ಅಲಹಾಬಾದ್‌ನ ಮಾನ್ಯ ಉಚ್ಚನ್ಯಾಯಾಲಯದ ತ್ರಿಸದಸ್ಯ ಪೀಠದ ತೀರ್ಪು ದಿನಾಂಕ 30–09–2010 ಎಂದು ಈ ಮೊದಲೇ ಪೂರ್ವಭಾವಿಯಾಗಿ ನಿಗದಿಯಾಗಿದ್ದ ಕಾರಣ, ತುರ್ತಾಗಿ ದಕ್ಷಿಣ ಕನ್ನಡ ಜಿಲ್ಲೆಯಾದ್ಯಂತ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡುವ ದೃಷ್ಟಿಯಿಂದ ಜಿಲ್ಲಾದಂಡಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ಇವರು ಸರ್ಕಾರದ ಅನುಮೋದನೆಯನ್ನು ಕಾಯ್ದಿರಿಸಿ ದಿನಾಂಕ 30–09–2010 ರಿಂದ 06–10–2010ರ ವರೆಗೆ ದಕ್ಷಿಣ ಕನ್ನಡ ಜಿಲ್ಲೆಯಾದ್ಯಂತ 10 ಜನ ವಿಶೇಷ ಕಾರ್ಯನಿರ್ವಾಹಕ ದಂಡಾಧಿಕಾರಿಗಳನ್ನು ನೇಮಿಸಿ ಹೊರಡಿಸಿದ್ದ ದಿನಾಂಕ 29–09–2010ರ ಅಧಿಸೂಚನೆ ಸಂಖ್ಯೆ: ಎಂಎಜಿ(2)ಸಿಆರ್503/2010–11/35544/ಸಿ4ಕ್ಕೆ (ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧವೂ ಸೇರಿದಂತೆ) ಸರ್ಕಾರವು ಘಟನೋತ್ತರ ಅನುಮೋದನೆಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

ಅನುಬಂಧ

(ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 461 ಎಸ್‌ಎಸ್‌ಟಿ 2010, ಬೆಂಗಳೂರು, ದಿನಾಂಕ 01-10-2010)

| ಕ್ರ. ಸಂ. | ಅಧಿಕಾರ ವ್ಯಾಪ್ತಿಯ ಪ್ರದೇಶ | ವಿಶೇಷ ಕಾರ್ಯನಿರ್ವಾಹಕ ದಂಡಾಧಿಕಾರಿಯಾಗಿ ನೇಮಕಗೊಂಡ ಅಧಿಕಾರಿಯ ಹೆಸರು ಮತ್ತು ಪದನಾಮ | ಕೇಂದ್ರ ಕಾರ್ಯಸ್ಥಾನ |
|---|---|---|---|
| 1 | 2 | 3 | 4 |
| 1 | ಪಣಂಬೂರು ಪೊಲೀಸ್ ಉಪವಿಭಾಗದ ಉಳ್ಳಾಲ ಮತ್ತು ಕೊಣಾಜೆ ಪೊಲೀಸ್ ಠಾಣಾ ವ್ಯಾಪ್ತಿ | ಶ್ರೀ ಬಿ. ಕೆ. ಕುಸುಮಾಧರ, ಉಪನಿರ್ದೇಶಕರು, ಭೂದಾಖಲೆಗಳ ಇಲಾಖೆ, ದ.ಕ.ಜಿಲ್ಲೆ, ಮಂಗಳೂರು | ಪುರಸಭಾ ಕಛೇರಿ, ಉಳ್ಳಾಲ ಪುರಸಭೆ |
| 2 | ಪಣಂಬೂರು ಮತ್ತು ಸುರತ್ಕಲ್ ಪೊಲೀಸ್ ಠಾಣಾ ವ್ಯಾಪ್ತಿ | ಶ್ರೀ ಎಂ. ಎನ್. ಜಯ, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಮಂಗಳೂರು | ಕಂದಾಯ ನಿರೀಕ್ಷಕರ ಕಛೇರಿ, ಸುರತ್ಕಲ್ ಹೋಬಳಿ |
| 3 | ಬಜ್ಪೆ ಮತ್ತು ಕಾವೂರು ಪೊಲೀಸ್ ಠಾಣಾ ವ್ಯಾಪ್ತಿ | ಶ್ರೀ ವೆಂಕಟೇಶ್ ಶಿಂದಿಹಟ್ಟಿ, ಸಹಾಯಕ ಕಾರ್ಮಿಕ ಆಯುಕ್ತರು, ಮಂಗಳೂರು | ಗ್ರಾಮಕರಣಿಕರ ಕಛೇರಿ, ಗ್ರಾಮಚಾವಡಿ, ಬಜ್ಪೆ |
| 4 | ಮುಲ್ಕಿ ಪೊಲೀಸ್ ಠಾಣಾ ವ್ಯಾಪ್ತಿ | ಶ್ರೀಮತಿ ರೋಹಿಣಿ ಸಿಂದೂರಿದಾಸರಿ, ಪ್ರೋಬೇಶನರಿ, ಐ.ಎ.ಎಸ್., ಜಿಲ್ಲಾಧಿಕಾರಿಗಳ ಕಛೇರಿ, ದ.ಕ. ಮಂಗಳೂರು | ನಗರ ಪಂಚಾಯತ್ ಕಛೇರಿ, ಮುಲ್ಕಿ |
| 5 | ಬಂಟ್ವಾಳ ಗ್ರಾಮಾಂತರ ಪೊಲೀಸ್ ಠಾಣಾ ವ್ಯಾಪ್ತಿ | ಶ್ರೀ ವಸಂತರಾಜ ಶೆಟ್ಟಿ, ಕಾರ್ಯನಿರ್ವಾಹಕ ಅಧಿಕಾರಿ ತಾಲ್ಲೂಕು ಪಂಚಾಯತ್, ಬಂಟ್ವಾಳ | ತಾಲ್ಲೂಕು ಪಂಚಾಯತ್ ಕಛೇರಿ, ಬಂಟ್ವಾಳ |
| 6 | ವಿಟ್ಲ ಪೊಲೀಸ್ ಠಾಣಾ, ವ್ಯಾಪ್ತಿ | ಶ್ರೀ ಲೋಕೇಶ್ವರ, ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಬಂಟ್ವಾಳ | ನಾಡ ಕಛೇರಿ ವಿಟ್ಲ |
| 7 | ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣಾ ವ್ಯಾಪ್ತಿ | ಶ್ರೀ ವೈ. ಶಿವರಾಮಯ್ಯ, ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಪುತ್ತೂರು | ತಾಲ್ಲೂಕು ಪಂಚಾಯತ್ ಕಛೇರಿ, ಪುತ್ತೂರು |
| 8 | ಉಪ್ಪಿನಂಗಡಿ ಪೊಲೀಸ್ ಠಾಣಾ ವ್ಯಾಪ್ತಿ | ಶ್ರೀ ಶಿವಕುಮಾರ್, ಸಹಾಯಕ ಕಾರ್ಯನಿರ್ವಾಹಕ ಆಭಿಯಂತರರು, ಲೋಕೋಪಯೋಗಿ ಇಲಾಖೆ, ಪುತ್ತೂರು | ನಾಡ ಕಛೇರಿ ಉಪ್ಪಿನಂಗಡಿ |
| 9 | ಪುಂಜಾಲಕಟ್ಟೆ, ವೇಣೂರು ಪೊಲೀಸ್ ಠಾಣಾ ವ್ಯಾಪ್ತಿ | ಶ್ರೀ ಕೆ. ಟಿ. ಕಾವೇರಿಯಪ್ಪ, ಅರಣ್ಯ ವ್ಯವಸ್ಥಾಧಿಕಾರಿ, ಜಿಲ್ಲಾಧಿಕಾರಿಯವರ ಕಛೇರಿ, ಮಂಗಳೂರು | ತಾಲ್ಲೂಕು ಕಛೇರಿ ಬೆಳ್ತಂಗಡಿ |
| 10 | ಸುಬ್ರಮಣ್ಯ ಪೊಲೀಸ್ ಠಾಣಾ ವ್ಯಾಪ್ತಿ | ಶ್ರೀ ಮಲ್ಲೇಸ್ವಾಮಿ, ಕ್ಷೇತ್ರ ಶಿಕ್ಷಣಾಧಿಕಾರಿ, ಸುಳ್ಯ | ಗ್ರಾಮ ಪಂಚಾಯತ್ ಕಛೇರಿ, ಸುಬ್ರಹ್ಮಣ್ಯ |

**ಕೆ. ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ.ಆರ್. 2885

## ಕಂದಾಯ ಸಚಿವಾಲಯ

**ವಿಷಯ** : 2010ನೇ ಸಾಲಿನಲ್ಲಿ ಪ್ರಕೃತಿ ವಿಕೋಪ ಪರಿಹಾರ ಕಾರ್ಯಗಳಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** : 1) ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ಅವರ ಪತ್ರದ ಸಂ: ಸಿ.ಎ.ಎಲ್./ಸಿ.ಆರ್./3/2010-11, ದಿನಾಂಕ 27-09-2010.
2) ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ ಇವರ ಪತ್ರದ ಸಂ:ಕಂ.ಪ್ರ.ವಿ:18: 2010-11, ದಿನಾಂಕ 30-09-2010.

**ಪ್ರಸ್ತಾವನೆ :**

2010ನೇ ಸಾಲಿನಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲಾಧಿಕಾರಿಗಳು ಪ್ರಕೃತಿ ವಿಕೋಪದಿಂದ ಆಗಿರುವ ಹಾನಿಗೆ ಪರಿಹಾರ ಕಾರ್ಯ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವಂತೆ ಮೇಲೆ ಓದಲಾದ ಪತ್ರಗಳಲ್ಲಿ ಕೋರಿರುತ್ತಾರೆ. ಈ ಹಿನ್ನೆಲೆಯಲ್ಲಿ ಜಿಲ್ಲಾಧಿಕಾರಿಗಳ ಪ್ರಸ್ತಾವನೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಪ್ರಕೃತಿ ವಿಕೋಪ ಪರಿಹಾರ ಕಾರ್ಯಗಳಿಗೆ ಅನುದಾನ ಬಿಡುಗಡೆ ಮಾಡಲು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 180 ಟಿಎನ್‌ಆರ್ 2010, ಬೆಂಗಳೂರು, ದಿನಾಂಕ: 16-11-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪ್ರಕೃತಿ ವಿಕೋಪ ಪರಿಹಾರ ಕಾರ್ಯಕೈಗೊಳ್ಳಲು, ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಈ ಕೆಳಕಂಡಂತೆ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರ.ಸಂ. | ಜಿಲ್ಲೆಯ ಹೆಸರು | ಬಿಡುಗಡೆ ಮಾಡಿದ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|
| 1 | ಚಿತ್ರದುರ್ಗ | 200.00 |
| 2 | ಬಳ್ಳಾರಿ | 200.00 |
| | **ಒಟ್ಟು** | **400.00** |
| (ರೂ. ನಾಲ್ಕು ನೂರು ಲಕ್ಷಗಳು ಮಾತ್ರ) | | |

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಪ್ರಕೃತಿ ವಿಕೋಪ ಪರಿಹಾರ ಮಾರ್ಗಸೂಚಿಗಳನ್ವಯ ಉಪಯೋಗಿಸಿಕೊಳ್ಳತಕ್ಕದ್ದು. ಪರಿಹಾರ ಕಾರ್ಯ ಕೈಗೊಳ್ಳುವಾಗ ಮಾನವ ಜೀವಹಾನಿ, ಜಾನುವಾರು ಜೀವಹಾನಿ, ಬೆಳೆಹಾನಿ, ಮನೆ ಹಾನಿಗೆ ಆದ್ಯತೆ ನೀಡತಕ್ಕದ್ದು, ಪ್ರಕೃತಿ ವಿಕೋಪದಿಂದ ಹಾನಿಯಾಗಿರುವ ಕಾಮಗಾರಿಗಳಿಗೆ ದುರಸ್ತಿ ಕಾರ್ಯಗಳನ್ನು ಪ್ರಕೃತಿ ವಿಕೋಪ ಮಾರ್ಗ ಸೂಚಿಯಲ್ಲಿ ಅವಕಾಶವಿರುವಂತಹ ಕಾಮಗಾರಿಗಳಿಗೆ ಮಾತ್ರ ಮತ್ತು ಮಾರ್ಗಸೂಚಿಯ ಐಟಂ ನಂ:18ರ ಪ್ರಕಾರ ಅವಕಾಶ ಇರುವ ಕಾಮಗಾರಿಗಳನ್ನು ಮಾತ್ರ ಕೈಗೊಳ್ಳುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಸಿ.ಆರ್.ಎಫ್. ಪಿಡಿ ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸಿಕೊಳ್ಳತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2245–01–800–1–01–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲ ಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿಯ ಸಂಖ್ಯೆ:ಆಇ: 347/ವೆಚ್ಚ–7/2010, ದಿನಾಂಕ 11–11–2010ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಗಂಗಾಧರ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ

ಪಿ.ಆರ್. 2886 (ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

## ಕಂದಾಯ ಸಚಿವಾಲಯ

**ವಿಷಯ** : ಮುಳಬಾಗಿಲಿನ ಶ್ರೀ ಶ್ರೀಪಾದರಾಜಮಠದ ನೂತನ ಪೀಠಾಧಿಕಾರಿಗಳಾದ ಶ್ರೀ ಶ್ರೀ ಕೇಶವನಿಧಿ ತೀರ್ಥರವರಿಗೆ ಪೀಠಾರೋಹಣ ಕಾರ್ಯಕ್ರಮವನ್ನು ಅನುಮೋದಿಸುವ ಬಗ್ಗೆ.

**ಓದಲಾಗಿದೆ** : ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪತ್ರ ಸಂಖ್ಯೆ: ಎಡಿಎಂ 11 ಇತರೆ/ಸಿಆರ್ 544/09–10, ದಿನಾಂಕ 16–1–2010 ಮತ್ತು ದಿನಾಂಕ 1–11–2010.

**ಪ್ರಸ್ತಾವನೆ :**

ಮುಳಬಾಗಿಲು ಶ್ರೀ ಶ್ರೀಪಾದರಾಜಮಠದ ಪೀಠಾಧಿಕಾರಿಗಳಾಗಿ ಈ ಹಿಂದೆ ಶ್ರೀ ಶ್ರೀ ಶ್ರೀ ವಿಜ್ಞಾನ ನಿಧಿ ತೀರ್ಥರುರವರು ಪೀಠಾಧಿಕಾರಿಗಳಾಗಿ ಕಾರ್ಯನಿರ್ವಹಿಸುತ್ತಿದ್ದು, ಅವರ ಬದಲಾಗಿ, ದಿವ್ಯ ಶ್ರೀ ಶ್ರೀಪಾದರಾಜ ಬೃಂದಾವನದ ಸನ್ನಿಧಾನದಲ್ಲಿ ನೆರವೇರಿಸಲ್ಪಟ್ಟಿರುವ ನೂತನವಾಗಿ ಪೀಠಾರೋಹಣಗೊಂಡ ಶ್ರೀಗಳನ್ನು ಶ್ರೀ ಶ್ರೀ ಶ್ರೀ ಕೇಶವನಿಧಿ ತೀರ್ಥರು (ಇವರ ಪೂರ್ವಾಶ್ರಮದ ಹೆಸರು ಶ್ರೀ ಕೆ. ಕೇಶವಮೂರ್ತಿ) ಎಂಬುವರ ನಾಮಾಂಕಿತದೊಂದಿಗೆ ಪೀಠಾಧಿಪತಿಗಳನ್ನಾಗಿ ಘೋಷಣೆ ಮಾಡಲಾಯಿತೆಂದೂ ಶ್ರೀ ಶ್ರೀ ಶ್ರೀ 108 ವಿಜ್ಞಾನ ನಿಧಿ ತೀರ್ಥರು ಶ್ರೀ ಮಠದ ಪೂರ್ಣ ಅಧಿಕಾರವನ್ನು ನೂತನ ಶ್ರೀಗಳಾದ ಶ್ರೀ ಶ್ರೀಕೇಶವ ನಿಧಿ ತೀರ್ಥರವರಿಗೆ ದಿನಾಂಕ 12–3–2009ರಂದು ಶ್ರೀಮಠದ ಅಪಾರ ಭಕ್ತಾದಿಗಳ ಹಾಗೂ ತಾಲ್ಲೂಕು ದಂಡಾಧಿಕಾರಿಗಳ ಸಮಕ್ಷಮದಲ್ಲಿ ಹಾಗೂ ವಿಧಿ ವಿಧಾನಗಳ ಪ್ರಕಾರ ಪೀಠಾರೋಹಣವನ್ನು ನೆರವೇರಿಸಲಾಗಿರುತ್ತದೆಯೆಂದೂ ತಹಶೀಲ್ದಾರ್ ರವರು ವರದಿ ಮಾಡಿರುತ್ತಾರೆಂದು, ಧಾರ್ಮಿಕ ದತ್ತಿ ಆಯುಕ್ತರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ತಿಳಿಸುತ್ತಾ ನೂತನ ಕಾಯ್ದೆಯನ್ವಯ ಮಠಗಳು ಕಾಯಿದೆಯ ವ್ಯಾಪ್ತಿಗೆ ಬಾರದಿದ್ದರೂ ಸರ್ಕಾರದಿಂದ ನೀಡುವ ಅನುದಾನ ತಸ್ತೀಕು ಹಾಗೂ ಇತರೆ ಯಾವುದಾದರೂ ಸವಲತ್ತುಗಳನ್ನು ನೀಡುವುದರಿಂದ ಹಾಗೂ ಇತರ ರಾಜ್ಯದಿಂದ ಮಠಗಳಿಗೆ ಬರುವ ಅನುದಾನ ಇತ್ಯಾದಿಗಳನ್ನು ಪಡೆಯಲು ಸದರಿ ಮಠದ ಪೀಠಾಧಿಕಾರಿಗಳ ಪೀಠಾರೋಹಣಕ್ಕೆ ಸರ್ಕಾರದ ಅನುಮೋದನೆ ಅವಶ್ಯಕವೆಂದು ಅಭಿಪ್ರಾಯ ಪಡುತ್ತಾ, ಮಠಗಳನ್ನು ನಿರ್ದಿಷ್ಟ ಸಂದರ್ಭಗಳಲ್ಲಿ ಮಾತ್ರ ಕಾಯಿದೆಯ ವ್ಯಾಪ್ತಿಯೊಳಗೆ ತರಬೇಕೆಂದು ವಿಶ್ರಾಂತ ನ್ಯಾಯಮೂರ್ತಿ ಶ್ರೀ ಮ. ರಾಮಾಜೋಯಿಸ್ ರವರು ನೀಡಿರುವ ವರದಿಯ ಬಗ್ಗೆ ಕಾಯಿದೆಗೆ ತಿದ್ದುಪಡಿ ತರುವ ವಿಚಾರದಲ್ಲಿ ನಡೆದ ಸಭೆಯಲ್ಲಿ ತೀರ್ಮಾನವಾಗಿರುವ ಹಿನ್ನೆಲೆಯಲ್ಲಿ ಕೂಡಾ ಮಠಗಳ ಉತ್ತರಾಧಿಕಾರಿಗಳ ಪೀಠಾಧಿಕಾರಿಗಳಿಗೆ ಸರ್ಕಾರದಿಂದ ಅಂಗೀಕಾರ ನೀಡುವುದು ಸೂಕ್ತವಾಗಿರುವುದರಿಂದ ಕೋಲಾರ ಜಿಲ್ಲೆಯ ಮುಳಬಾಗಿಲಿನ ಶ್ರಿ ಶ್ರೀಪಾದರಾಜ ಮಠಕ್ಕೆ ಹೊಸದಾಗಿ ನೇಮಕ ಹೊಂದಿದ ಪೀಠಾಧಿಕಾರಿಗಳಾದ ಶ್ರೀ ಶ್ರೀ ಶ್ರೀ ಕೇಶವನಿಧಿ ತೀರ್ಥರ ಪಟ್ಟಾಧಿಕಾರಕ್ಕೆ ಸರ್ಕಾರದ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಧಾರ್ಮಿಕ ದತ್ತಿ ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 14 ಮುಸೇವಿ 2010, ಬೆಂಗಳೂರು, ದಿನಾಂಕ: 16–11–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕೋಲಾರ ಜಿಲ್ಲೆ ಮುಳಬಾಗಿಲಿನ ಶ್ರೀ ಶ್ರೀಪಾದರಾಜ ಮಠಕ್ಕೆ ಹೊಸದಾಗಿ ಆಯ್ಕೆಯಾದ ಪೀಠಾಧಿಕಾರಿಗಳಾದ ಶ್ರೀ ಶ್ರೀ ಶ್ರೀ ಕೇಶವನಿಧಿ ತೀರ್ಥರ ಪಟ್ಟಾಧಿಕಾರಕ್ಕೆ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997ರ ಕಾಯ್ದೆಗೆ ತಿದ್ದುಪಡಿ ತರುವ ಬಗ್ಗೆ ಉನ್ನತ ಮಟ್ಟದ ಸಮಿತಿಯು ನೀಡಿದ ವರದಿಯನ್ವಯ ತಿದ್ದುಪಡಿ ತರುವ ಷರತ್ತಿಗೊಳಪಟ್ಟು ಸರ್ಕಾರದಿಂದ ಮಾನ್ಯತೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್. ಎಸ್. ಶ್ರೀಕಂಠಬಾಬು**

ಪೀಠಾಧಿಕಾರಿ

ಪಿ.ಆರ್. 2887 ಕಂದಾಯ ಇಲಾಖೆ (ಮುಜರಾಯಿ)

17. The developer shall duly oblige the laws concerning environment
18. Any other obligations, the Executive Committee, KSHDA feels appropriate during the project development implementation agreement stage.

**OBLIGATION OF KSHDA :**

(ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿಯು ನಿರ್ವಹಿಸಬೇಕಾದ ಷರತ್ತುಗಳು)

1. KSHDA shall grant in a timely manner all such approvals, permissions and authorizations which the developer may require or is obliged to seek from KSHDA under this agreement, in connection with implementation of the project and the performance of its obligations.
2. KSHDA shall ensure at all times that the activities undertaken in its area adjacent to the project site shall not cause any obstruction or in convenience to the developer in implementation of the project.

NOTE : Rest of the terms and conditions shall be as per the project development and implementation agreement.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಸಿ. ಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ

ಪಿ.ಆರ್. ನಂ. 2917

## ಆರ್ಥಿಕ ಸಚಿವಾಲಯ

**ವಿಷಯ** : ಕರ್ನಾಟಕ ರಾಜ್ಯ ಮೌಲ್ಯವರ್ಧಿತ ತೆರಿಗೆ ಸಲಹಾ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 142 ಸಿಎಸ್‌ಇ 2005, ದಿನಾಂಕ 09–05–2005
2) ಸರ್ಕಾರದ ಆದೇಶ ಸಂಖ್ಯೆ: ಆಇ 142 ಸಿಎಸ್‌ಇ 2005, ದಿನಾಂಕ 23–11–2005

***

**ಪ್ರಸ್ತಾವನೆ :**

ಕರ್ನಾಟಕ ರಾಜ್ಯದಲ್ಲಿ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2005 ದಿನಾಂಕ 1–4–2005 ರಿಂದ ಜಾರಿಗೆ ಬಂದಿದೆ. ರಾಜ್ಯ ಮೌಲ್ಯವರ್ಧಿತ ತೆರಿಗೆ ಪದ್ಧತಿ ಜಾರಿಗೆ ಬಂದಿರುವುದರಿಂದ ಈ ತೆರಿಗೆ ಪದ್ಧತಿಯು ಸುಗಮವಾಗಿ ಕಾರ್ಯನಿರ್ವಹಿಸಲು ಹಲವಾರು ಅಂಶಗಳ ಬಗ್ಗೆ ವಿಶ್ಲೇಷಿಸಬೇಕಾಗಿದೆ. ಇವುಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಎಲ್ಲಾ ಸ್ಟೇಕ್ ಹೋಲ್ಡರ್ಸ್ (stakeholders) ಪ್ರತಿನಿಧಿಗಳು ಹೊಸ ತೆರಿಗೆ ಪದ್ಧತಿಯಿಂದ ರಾಜ್ಯದ ತೆರಿಗೆ ಸಂಗ್ರಹಣೆ, ತೆರಿಗೆಯ ವ್ಯಾಪ್ತಿಯನ್ನು ವಿಸ್ತರಿಸುವುದರ ಜೊತೆಗೆ ಈ ಹೊಸ ಪದ್ಧತಿ ಹೇಗೆ ಕರದಾತರಿಗೆ ಸ್ನೇಹ ಪರವಾಗಿದೆ ಎಂಬುದರ ಬಗ್ಗೆ ಸಲಹೆ ಸೂಚನೆ ಅಗತ್ಯವಿರುತ್ತದೆ. ಆದ್ದರಿಂದ ಹಣಕಾಸು ಖಾತೆಯನ್ನು ಮುಖ್ಯಮಂತ್ರಿಗಳು ಹೊಂದಿರುವುದರಿಂದ ಹಾಲಿ ರಚಿಸಲಾಗಿರುವ ಸಮಿತಿಯನ್ನು ರದ್ದುಪಡಿಸಿ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ಕರ್ನಾಟಕ ರಾಜ್ಯ ಮೌಲ್ಯವರ್ಧಿತ ತೆರಿಗೆ ಸಲಹಾ ಸಮಿತಿಯನ್ನು ಪುನರ್ ರಚಿಸಲು ಉದ್ದೇಶಿಸಿರುವುದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಇ 222 ವಾತೆಸಿ 2010, ಬೆಂಗಳೂರು, ದಿನಾಂಕ: 26–11–2010**

ಪ್ರಸ್ತಾವನೆಯಲ್ಲಿ ತಿಳಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಮೇಲೆ ಓದಲಾದ ಆದೇಶಗಳಲ್ಲಿ ರಚಿಸಿರುವ ಕರ್ನಾಟಕ ರಾಜ್ಯ ಮೌಲ್ಯವರ್ಧಿತ ತೆರಿಗೆ ಸಲಹಾ ಸಮಿತಿಯನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ ಹಾಗೂ ಈ ಕೆಳಕಂಡಂತೆ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ಪುನರ್ ರಚಿಸಲಾಗಿದೆ.

| | | |
|---|---|---|
| 1 | ಮಾನ್ಯ ಮುಖ್ಯಮಂತ್ರಿಗಳು | ಅಧ್ಯಕ್ಷರು |
| 2 | ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ | ಸದಸ್ಯರು |
| 3 | ಪ್ರಧಾನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ | ಸದಸ್ಯರು |
| 4 | ಕಾರ್ಯದರ್ಶಿ (ಆ ಮತ್ತು ಸಂ) ಆರ್ಥಿಕ ಇಲಾಖೆ | ಸದಸ್ಯರು |
| 5 | ನಿರ್ದೇಶಕರು, ಕೃಷಿ ಮಾರುಕಟ್ಟೆ ಇಲಾಖೆ, ಬೆಂಗಳೂರು | ಸದಸ್ಯರು |
| 6 | ಕನ್‌ಫೆಡರೇಷನ್ ಆಫ್ ಇಂಡಿಯನ್ ಇಂಡಸ್ಟ್ರೀಸ್‌ನಿಂದ ನಾಮಕರಣಗೊಂಡವರು | ಸದಸ್ಯರು |
| 7 | ಇನ್‌ಸ್ಟಿಟ್ಯೂಟ್ ಫಾರ್ ಸೋಶಿಯಲ್ ಅಂಡ್ ಎಕನಾಮಿಕ್ ಚೇಂಜ್, ಬೆಂಗಳೂರು ಇವರಿಂದ ನಾಮಕರಣಗೊಂಡವರು | ಸದಸ್ಯರು |
| 8 | ಅಧ್ಯಕ್ಷರು, ಇನ್‌ಸ್ಟಿಟ್ಯೂಟ್ ಆಫ್ ಚಾರ್ಟೆಡ್ ಅಕೌಂಟೆಂಟ್ಸ್ ಆಫ್ ಇಂಡಿಯಾ | ಸದಸ್ಯರು |
| 9 | ಅಧ್ಯಕ್ಷರು, ಕರ್ನಾಟಕ ಟ್ಯಾಕ್ಸ್‌ಬಾರ್ ಅಸೋಸಿಯೇಷನ್, ಬೆಂಗಳೂರು | ಸದಸ್ಯರು |
| 10 | ಅಧ್ಯಕ್ಷರು, ಫೆಡರೇಷನ್ ಕರ್ನಾಟಕ ಛೇಂಬರ್ಸ್ ಆಫ್ ಕಾಮರ್ಸ್ ಅಂಡ್ ಇಂಡಸ್ಟ್ರೀಸ್, ಬೆಂಗಳೂರು | ಸದಸ್ಯರು |
| 11 | ಅಧ್ಯಕ್ಷರು, ದಿ ಗ್ರೇಟ್ ಮೈಸೂರು ಛೇಂಬರ್ಸ್ ಆಫ್ ಕಾಮರ್ಸ್ ಅಂಡ್ ಇಂಡಸ್ಟ್ರೀಸ್, ಬೆಂಗಳೂರು | ಸದಸ್ಯರು |

| | | |
|---|---|---|
| 12 | ಅಧ್ಯಕ್ಷರು, ಮೈಸೂರು ಛೇಂಬರ್ಸ್ ಆಫ್ ಕಾಮರ್ಸ್ ಅಂಡ್ ಇಂಡಸ್ಟ್ರೀಸ್, ಮೈಸೂರು | ಸದಸ್ಯರು |
| 13 | ಅಧ್ಯಕ್ಷರು, ಕರ್ನಾಟಕ ಛೇಂಬರ್ಸ್ ಆಫ್ ಕಾಮರ್ಸ್ ಅಂಡ್ ಇಂಡಸ್ಟ್ರೀಸ್, ಹುಬ್ಬಳ್ಳಿ | ಸದಸ್ಯರು |
| 14 | ಅಧ್ಯಕ್ಷರು, ಬೆಳಗಾಂ ಛೇಂಬರ್ಸ್ ಆಫ್ ಕಾಮರ್ಸ್ ಅಂಡ್ ಇಂಡಸ್ಟ್ರೀಸ್, ಬೆಳಗಾಂ | ಸದಸ್ಯರು |
| 15 | ಅಧ್ಯಕ್ಷರು, ಹೈದರಾಬಾದ್ ಕರ್ನಾಟಕ ಛೇಂಬರ್ಸ್ ಆಫ್ ಕಾಮರ್ಸ್ ಅಂಡ್ ಇಂಡಸ್ಟ್ರೀಸ್, ಗುಲ್ಬರ್ಗಾ | ಸದಸ್ಯರು |
| 16 | ಅಧ್ಯಕ್ಷರು, ಕರ್ನಾಟಕ ಸಣ್ಣ ಕೈಗಾರಿಕೆಗಳ ಸಂಘ, ಬೆಂಗಳೂರು | ಸದಸ್ಯರು |
| 17 | ಅಧ್ಯಕ್ಷರು, ಕರ್ನಾಟಕ ಫಿಲಂ ಛೇಂಬರ್ಸ್ ಆಫ್ ಕಾಮರ್ಸ್ | ಸದಸ್ಯರು |
| 18 | ಅಧ್ಯಕ್ಷರು, ಪ್ಲಾಂಟರ್ಸ್ ಅಸೋಷಿಯೇಷನ್ ಆಫ್ ಕರ್ನಾಟಕ | ಸದಸ್ಯರು |
| 19 | ಅಧ್ಯಕ್ಷರು, ರಾಜ್ಯ ಹೋಟೆಲ್‌ಗಳ ಮಾಲೀಕರ ಸಂಘ, ಬೆಂಗಳೂರು | ಸದಸ್ಯರು |
| 20 | ವಾಣಿಜ್ಯ ತೆರಿಗೆ ಆಯುಕ್ತರು | ಸದಸ್ಯ ಕಾರ್ಯದರ್ಶಿ |
| 21 | ಶ್ರೀ ಬಿ. ಟಿ. ಮನೋಹರ್, ತೆರಿಗೆ ಸಲಹೆಗಾರರು | ಸದಸ್ಯರು |
| 22 | ಶ್ರೀ ಡಿ. ವೆಂಕಟೇಶ್, ತೆರಿಗೆ ವಕೀಲರು | ಸದಸ್ಯರು |
| 23 | ಶ್ರೀ ಎಸ್. ವೆಂಕಟರಮಣಿ, ಚಾರ್ಟರ್ಡ್ ಅಕೌಂಟೆಂಟ್ | ಸದಸ್ಯರು |
| 24 | ಶ್ರೀ ಬಿ. ಕೆ. ಗೋಯಲ್, ತೆರಿಗೆ ವಿಶ್ಲೇಷಕರು | ಸದಸ್ಯರು |
| 25 | ಶ್ರೀ ಎಫ್. ಆರ್. ಸಿಂಘಿ, ಸದಸ್ಯರು, ಆಟೋಮೊಬೈಲ್ ಕಾಂಪೊನೆಂಟ್ಸ್ ಮ್ಯಾನುಫ್ಯಾಕ್ಚರರ್ಸ್ ಅಸೋಸಿಯೇಷನ್ ಆಫ್ ಇಂಡಿಯಾ | ಸದಸ್ಯರು |
| 26 | ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಕಾನೂನು ಮತ್ತು ಕಾರ್ಯನೀತಿ) | ಖಾಯಂ ಆಹ್ವಾನಿತರು |

ಸಮಿತಿಯು ಪ್ರತಿ ತ್ರೈಮಾಸಿಕವಾಗಿ ಸಭೆ ಸೇರಿ ವಾಣಿಜ್ಯ ತೆರಿಗೆ ಇಲಾಖೆಯ ವ್ಯಾಪ್ತಿಗೆ ಬರುವ ಎಲ್ಲಾ ಕಾಯ್ದೆಗಳಿಗೆ ಸಂಬಂಧಿಸಿದಂತೆ ಈ ಕೆಳಗಿನ ಅಂಶಗಳನ್ನು ಪರಿಶೀಲಿಸಿ ಸೂಕ್ತ ಸಲಹೆ ನೀಡಬೇಕು.

(ಅ) VAT ತೆರಿಗೆ ಸರಳೀಕರಣ, ರಚನೆ ವಿಧಿಗಳನ್ನು ರೂಪಿಸುವುದು

(ಆ) ಎಂಪವರ್ಡ್ ಸಮಿತಿಯ ಮುಂದೆ ಮಂಡಿಸಬೇಕಾದ ಅಂಶಗಳ ಬಗ್ಗೆ ಚರ್ಚಿಸುವುದು.

(ಇ) ಚಾಲ್ತಿಯಲ್ಲಿರುವ ತೆರಿಗೆ ಆಧಾರದ ಮೇಲೆ ಆದಾಯವನ್ನು ಹೆಚ್ಚಿಸುವುದು. ತೆರಿಗೆ ಸೋರುವಿಕೆಯನ್ನು ತಡೆಗಟ್ಟುವುದು.

(ಈ) ಕರದಾತರು ಹಾಗೂ ಇಲಾಖೆಯ ನಡುವೆ ಸರಿಯಾದ ಸಾಮರಸ್ಯ ಬೆಳೆಸುವುದು

(ಉ) ವ್ಯಾಪಾರಿಗಳು ಮತ್ತು ಕೈಗಾರಿಕೆಗಳು ಏನಾದರೂ ತೊಂದರೆ ಅನುಭವಿಸುತ್ತಿದ್ದಲ್ಲಿ ಸರ್ಕಾರಕ್ಕೆ ಬರುವ ಆದಾಯಕ್ಕೆ ಚ್ಯುತಿಯಾಗದಂತೆ ಅಂತಹ ತೊಂದರೆಗಳನ್ನು ನಿವಾರಿಸುವುದು.

(ಊ) ವೃತ್ತಿ ತೆರಿಗೆ, ಮೌಲ್ಯಾಧಾರಿತ ತೆರಿಗೆ, ಜೂಜು ತೆರಿಗೆ ಮುಂತಾದ ತೆರಿಗೆಗಳ ಬಗ್ಗೆ ಚರ್ಚಿಸಿ ನಿರ್ಣಯ ತೆಗೆದುಕೊಳ್ಳುವುದು.

ಅಧಿಕಾರೇತರ ಸದಸ್ಯರು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 18 ಎಸ್‌ಆರ್‌ಎಸ್ 94, ಬೆಂಗಳೂರು, ದಿನಾಂಕ 30-12-94ರ ಅನ್ವಯ ಭತ್ಯೆಗಳನ್ನು ಪಡೆಯಲು ಅರ್ಹತೆ ಹೊಂದಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಆರ್. ಚಂದ್ರಶೇಖರಾರಾಧ್ಯ**
ಪೀಠಾಧಿಕಾರಿ
ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ-2)

ಪಿ.ಆರ್. ನಂ. 2918

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ** : ದಿ ಕೃಷ್ಣಾ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಅಥಣಿ, ಬೆಳಗಾಂ ಜಿಲ್ಲೆ, ಈ ಕಾರ್ಖಾನೆಯ ಸಾಮರ್ಥ್ಯವನ್ನು ಈಗಿರುವ 2500 ಟಿಸಿಡಿ ಇಂದ 4000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಿಕೊಳ್ಳಲು ಸರ್ಕಾರ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ: ಸಿಐ 187 ಎಸ್‌ಜಿಎಫ್ 07, ದಿನಾಂಕ 11-09-2007

2) ಆಯುಕ್ತರು ಕಬ್ಬು ಅಭಿವೃದ್ಧಿರವರ ಪತ್ರ ಸಂಖ್ಯೆ: ಡಿಎಸ್‌ಕೆ/ಎಫ್‌ಐಎನ್/435/2009-10, ದಿನಾಂಕ 03-05-2010.

**ಪ್ರಸ್ತಾವನೆ :**

ಮೇಲೆ ಓದಲಾದ (2)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿರವರ ಪತ್ರದಲ್ಲಿ ದಿ. ಕೃಷ್ಣಾ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಅಥಣಿ ತಾಲ್ಲೂಕು, ಬೆಳಗಾಂ ಜಿಲ್ಲೆ, ಈ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು ಈಗಿರುವ 2500 ಟಿಸಿಡಿ ಇಂದ 4000 ಡಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಲು ಉದ್ದೇಶಿಸಿದ್ದಾರೆಂದು ತಿಳಿಸಿ ಈ ಕಾರ್ಖಾನೆಯ ಸಾಮರ್ಥ್ಯ ವಿಸ್ತರಣೆಗೆ ಸರ್ಕಾರದ ಅನುಮತಿಯನ್ನು ನೀಡಲು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರ ಪ್ರಸ್ತಾವನೆಯನ್ನು ಮೇಲೆ ಓದಲಾದ (1)ರಲ್ಲಿನ ಆದೇಶದಲ್ಲಿ ಅಳವಡಿಸಿಕೊಳ್ಳಲಾಗಿರುವ ನೀತಿಯನ್ವಯ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 91 ಎಸ್‌ಜಿಎಫ್ 2010, ಬೆಂಗಳೂರು, ದಿನಾಂಕ: 26-11-2010**

ದಿ. ಕೃಷ್ಣಾ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಅಥಣಿ ತಾಲ್ಲೂಕು, ಬೆಳಗಾಂ ಜಿಲ್ಲೆ, ಈ ಸಕ್ಕರೆ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು ಈಗಿರುವ 2500 ಟಿಸಿಡಿ ಇಂದ 4000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಿಕೊಳ್ಳಲು ಸರ್ಕಾರದ ಅನುಮೋದನೆಯನ್ನು ಕಾರ್ಖಾನೆಗೆ ಹೆಚ್ಚುವರಿಯಾಗಿ ಬೇಕಾಗುವ ಕಬ್ಬನ್ನು ಕಾರ್ಖಾನೆಗೆ ಹಂಚಿಕೆಯಾಗಿರುವ ಕಬ್ಬಿನ ಮೀಸಲು ಪ್ರದೇಶಗಳನ್ನು ಅಭಿವೃದ್ಧಿಪಡಿಸಿಕೊಳ್ಳುವ ಮೂಲಕ ಪಡೆದುಕೊಳ್ಳಬೇಕೆಂದು, ಹೆಚ್ಚುವರಿ ಕಬ್ಬಿನ ಮೀಸಲು ಕ್ಷೇತ್ರಗಳನ್ನು ಹಂಚಿಕೆ ಮಾಡಲು ಬೇಡಿಕೆ ಸಲ್ಲಿಸಬಾರದೆಂಬ ಹಾಗೂ ವಿಸ್ತರಿಸಿದ ಸಾಮರ್ಥ್ಯಕ್ಕೆ ಪರಿಸರ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಕ್ಲಿಯರೆನ್ಸ್ ಪಡೆದು ಸರ್ಕಾರಕ್ಕೆ ಸಲ್ಲಿಸಬೇಕೆಂಬ ಷರತ್ತುಗಳನ್ನು ವಿಧಿಸಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದ ಕುಮಾರ್**

ಪೀಠಾಧಿಕಾರಿ (ಸಕ್ಕರೆ)

ಪಿ.ಆರ್. ನಂ. 2941 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ** : ಬೆಂಗಳೂರಿನಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ಉಪನಿರ್ದೇಶಕರ ಹುದ್ದೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ** :
1) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 90 ಕೆಎಂಯು 2003, ದಿನಾಂಕ 5-9-2003
2) ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 11 ಕೆಎಂಯು 2007, ದಿನಾಂಕ 26-7-2007 ಮತ್ತು 11-12-2007.
3) ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 215 ಕೆಎಂಯು 2008, ದಿನಾಂಕ 16-12-2008
4) ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 203 ಕೆಎಂಯು 2009, ದಿನಾಂಕ 04-12-2009
5) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರ ಪತ್ರ ಸಂಖ್ಯೆ: ಡಿಎಎಂ:ಇಎಸ್‌ಟಿ:1:ಕ:ಸಂಖ್ಯೆ:350:2009-10, ದಿನಾಂಕ 25-10-2010.

***

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 05-09-2003ರ ಸರ್ಕಾರಿ ಆದೇಶದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ, ಬೆಂಗಳೂರಿನಲ್ಲಿರುವ ಸಹಾಯಕ ನಿರ್ದೇಶಕರ (ವಸ್ತು ಸಂಗ್ರಹಾಲಯಗಳ ಅಭಿವೃದ್ಧಿ) ಹುದ್ದೆಯನ್ನು ಒಂದು ವರ್ಷದ ಅವಧಿಗೆ ಉಪನಿರ್ದೇಶಕರ ಹುದ್ದೆಗೆ ಉನ್ನತೀಕರಿಸಲಾಯಿತು. ಸದರೀ ಹುದ್ದೆಯ ಕಾಲಕಾಲಕ್ಕೆ ಮುಂದುವರಿಸಲ್ಪಟ್ಟು ಮೇಲೆ (2)ರಲ್ಲಿ ಓದಲಾದ ದಿನಾಂಕ 26-07-2007ರ ಸರ್ಕಾರಿ ಆದೇಶದಲ್ಲಿ 05-09-2006 ರಿಂದ ಒಂದು ವರ್ಷದವರೆಗೆ ಹಾಗೂ ದಿನಾಂಕ 11-12-2007ರ ಆದೇಶದಲ್ಲಿ ಮತ್ತೊಂದು ವರ್ಷದವರೆಗೆ ಮುಂದುವರಿಸಿ ಆದೇಶಿಸಲಾಗಿದೆ. ಉಲ್ಲೇಖ (3)ರಲ್ಲಿ ಓದಲಾದ ದಿನಾಂಕ: 16-12-2008ರ ಆದೇಶದಲ್ಲಿ ಉಪ ನಿರ್ದೇಶಕರ ಹುದ್ದೆಯನ್ನು ದಿನಾಂಕ 05-09-2008ರಿಂದ 05-09-2009ರವರೆಗೆ ಮತ್ತೊಂದು ವರ್ಷದ ಅವಧಿಗೆ ಮುಂದುವರಿಸಿ ಆದೇಶಿಸಲಾಗಿದೆ. ಉಲ್ಲೇಖ(4)ರಲ್ಲಿ ಓದಲಾದ ದಿನಾಂಕ 04-12-2009ರ ಆದೇಶದಲ್ಲಿ ಸದರಿ ಉಪ ನಿರ್ದೇಶಕರ ಹುದ್ದೆಯನ್ನು ದಿನಾಂಕ 05-09-2009 ರಿಂದ 04-09-2010ರವರೆಗೆ ಮತ್ತೊಂದು ವರ್ಷದ ಅವಧಿಗೆ ಮುಂದುವರೆಸಿ ಆದೇಶಿಸಲಾಗಿದೆ. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಇಲಾಖೆಯ ವ್ಯಾಪ್ತಿಗೆ ಬರುವ ಸ್ಮಾರಕ ಸಂರಕ್ಷಣೆ, ಸಂಗ್ರಹಾಲಯಗಳ ಸ್ಥಾಪನೆ/ನಿರ್ವಹಣೆ, ಪುರಾತತ್ವ ಸಂಶೋಧನೆ ಮತ್ತು ಸಾರ್ವಜನಿಕ/ಖಾಸಗಿ ಸಹಭಾಗಿತ್ವದಲ್ಲಿ ಕೈಗೊಳ್ಳಲಾಗುವ ಸ್ಮಾರಕಗಳ ಸಂರಕ್ಷಣಾ ಕಾರ್ಯಗಳ ಪರಿವೀಕ್ಷಣೆ, ಇಲಾಖೆಯ ಹಾಗೂ ಸರ್ಕಾರದ ನಡುವೆ ಸಮನ್ವಯ ಸಾಧಿಸಲು ಬೆಂಗಳೂರಿನಲ್ಲಿರುವ ಉಪನಿರ್ದೇಶಕರ ಹುದ್ದೆಯು ಅತ್ಯಂತ ಪ್ರಮುಖ ಹಾಗೂ ಅತ್ಯಾವಶ್ಯಕವಾಗಿರುತ್ತದೆಯೆಂದು ದಿನಾಂಕ 25-10-2010ರ ಮೇಲೆ ಓದಲಾದ (5)ರ ಪತ್ರದಲ್ಲಿ ದಿನಾಂಕ 05-09-2010 ರಿಂದ ಇನ್ನೆರಡು ವರ್ಷಗಳ ಅವಧಿಗೆ ಮುಂದುವರಿಸಲು ಪ್ರಸ್ತಾವಿಸಿರುವರು.

ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 218 ಕೆಎಂಯು 2010, ಬೆಂಗಳೂರು, ದಿನಾಂಕ: 29-11-2010**

ಬೆಂಗಳೂರಿನಲ್ಲಿರುವ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ಉಪನಿರ್ದೇಶಕರ ಹುದ್ದೆಯನ್ನು ದಿನಾಂಕ 05-09-2010 ರಿಂದ 04-09-2012ರ ವರೆಗೆ ಎರಡು ವರ್ಷದ ಅವಧಿಗೆ ಸರ್ಕಾರವು ಈ ಮೂಲಕ ಮುಂದುವರಿಸಿ ಆದೇಶಿಸಿದೆ. ಈ ಹುದ್ದೆಗೆ ಪರಿಷ್ಕೃತ ವೇತನ ಶ್ರೇಣಿಯಲ್ಲಿ ನಿಯಮಾನುಸಾರ ಲಭ್ಯವಿರುವ ವೇತನ ಭತ್ಯೆ ಇತ್ಯಾದಿಗಳು ಅನ್ವಯಿಸುತ್ತವೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10-07-1996ರಲ್ಲಿ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಆದೇಶದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ವಿ. ರಾಮಚಂದ್ರರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

ಪಿ.ಆರ್. ನಂ. 2942 (ಆಡಳಿತ ಕನ್ನಡ)(ಪ್ರ)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ** : ಯಾದಗೀರ್ ಜಿಲ್ಲಾ ಪಂಚಾಯತಿಯಲ್ಲಿ "ಜಿಲ್ಲಾ ಗ್ರಾಮೀಣಾಭಿವೃದ್ಧಿ ಆಡಳಿತ"ದ ಅಡಿಯಲ್ಲಿ "ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ ಕೋಶ" ವನ್ನು ರಚಿಸುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರಿ ಅಧಿಸೂಚನೆ ಸಂಖ್ಯೆ: ಆರ್‌ಡಿಪಿ:227(1):ಜಡ್‌ಪಿಎಸ್: 2009, ದಿನಾಂಕ 29–12–2009

2) ಸರ್ಕಾರಿ ಆದೇಶ ಸಂಖ್ಯೆ: ಸಂ. ಗ್ರಾಅಪ:202:ಕೆಎಸ್‌ಎಸ್:2009, ದಿನಾಂಕ 30–12–2009

3) ಸರ್ಕಾರಿ ಅಧಿಸೂಚನೆ ಸಂ. ಆರ್‌ಡಿಪಿ:202:ಕೆಎಸ್‌ಎಸ್:09, ದಿನಾಂಕ 24-09-2010

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ 29–12–2009ರ ಅಧಿಸೂಚನೆಯಲ್ಲಿ, ನೂತನವಾಗಿ ಸೃಜನೆಗೊಂಡ ಯಾದಗೀರ್ ಜಿಲ್ಲೆಯಲ್ಲಿ ಹೊಸ ಜಿಲ್ಲಾ ಪಂಚಾಯಿತಿಯನ್ನು ರಚಿಸಲಾಗಿರುತ್ತದೆ. ಅದರಂತೆ ಮೇಲೆ ಓದಲಾದ (2)ರ ಆದೇಶದಲ್ಲಿ ಯಾದಗೀರ್ ಜಿಲ್ಲಾ ಪಂಚಾಯಿತಿ ಕಛೇರಿಗೆ ಹುದ್ದೆಗಳನ್ನು ಸೃಜಿಸಲಾಗಿದೆ.

ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಪ್ರತಿ ಜಿಲ್ಲಾ ಪಂಚಾಯತಿಯಲ್ಲಿ ಜಿಲ್ಲಾ ಗ್ರಾಮೀಣಾಭಿವೃದ್ಧಿ ಸಂಸ್ಥೆ ಕೋಶವನ್ನು ಸ್ಥಾಪಿಸುವ ಬಗ್ಗೆ ಹೊರಡಿಸಿರುವ ಮಾರ್ಗಸೂಚಿಯನ್ವಯ ನೂತನವಾಗಿ ಸೃಜನೆಗೊಂಡ ಯಾದಗೀರ್ ಜಿಲ್ಲೆಯಲ್ಲಿಯೂ ಪ್ರತ್ಯೇಕವಾಗಿ ಜಿಲ್ಲಾ ಗ್ರಾಮೀಣಾಭಿವೃದ್ಧಿ ಸಂಸ್ಥೆ ಕೋಶಗಳನ್ನು ರಚಿಸಿ ಮೇಲೆ (3)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಆದೇಶಿಸಲಾಗಿದೆ. ಸದರಿ ಕೋಶಕ್ಕೆ ಬೆಂಬಲ ಸಿಬ್ಬಂದಿಯ ಅವಶ್ಯಕತೆ ಇರುವುದರಿಂದ, ಹಿಂದೆ 29 ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ ಕೋಶಗಳಿಗೆ ಹುದ್ದೆಗಳನ್ನು ಮಂಜೂರು ಮಾಡಿರುವ ಮಾದರಿಯಲ್ಲಿ ಯಾದಗೀರ್ ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ ಕೋಶ (DRDA Cell) ಕ್ಕೂ ಸಹ ಹುದ್ದೆಗಳನ್ನು ಸೃಜಿಸಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 202 ಕೆಎಸ್‌ಎಸ್ 2009, ಬೆಂಗಳೂರು, ದಿನಾಂಕ: 26–11–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಯಾದಗೀರ್ ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ ಕೋಶಕ್ಕೆ (DRDA Cell) ಅನುಬಂಧ ಕಲಂ (4) ರಲ್ಲಿ ತೋರಿಸಿರುವ ಹುದ್ದೆಗಳನ್ನು ಸೃಜಿಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ 10–11–2010ರ ಟಿಪ್ಪಣಿ ಸಂ. ಆಇ 525 ವೆಚ್ಚ–6/2009ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಯು. ಶಿವಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 202 ಕೆಎಸ್‌ಎಸ್ 09, ದಿನಾಂಕ 26–11–2010ಕ್ಕೆ ಅನುಬಂಧ**

**ಯಾದಗೀರ್ ಜಿಲ್ಲಾ ಪಂಚಾಯತ್ ಜಿಲ್ಲಾ ಗ್ರಾಮೀಣಾಭಿವೃದ್ಧಿ ಸಂಸ್ಥೆ ಕೋಶದ (DRDA Cell) ವೃಂದ ಬಲ**

| ಕ್ರ.ಸಂ. | ಹುದ್ದೆಯ ಹೆಸರು | ವೇತನ ಶ್ರೇಣಿ | ನೂತನ ಯಾದಗೀರ್ ಜಿ.ಪಂ.ಗೆ ಸೃಜಿಸಲಾಗುತ್ತಿರುವ ಹುದ್ದೆಗಳ ಸಂಖ್ಯೆ |
|---|---|---|---|
| 1 | 2 | 3 | 4 |
| 1 | ಯೋಜನಾ ನಿರ್ದೇಶಕರು (ಡಿಆರ್‌ಡಿಎ ಕೋಶ) | 20025–28275 | 1 |
| 2 | ಕಾರ್ಯನಿರ್ವಾಹಕ ಇಂಜಿನಿಯರ್ (ಡಿಆರ್‌ಡಿಎ ಕೋಶ) | 18150–26925 | 1 |
| 3 | ಸಹಾಯಕ ಯೋಜನಾಧಿಕಾರಿ (ಡಿಆರ್‌ಡಿಎ ಕೋಶ) | 14050–25050 | 1 |
| 4 | ಲೆಕ್ಕಾಧಿಕಾರಿ (ಡಿಆರ್‌ಡಿಎ ಕೋಶ) | 14050–25050 | 1 |
| 5 | ಸಹಾಯಕ ಯೋಜನಾಧಿಕಾರಿ (ಡಿಆರ್‌ಡಿಎ ಕೋಶ) (ಎಸ್ ಜಿಎಸ್‌ವೈ) | 11400–21600 | 1 |
| 6 | ತಾಂತ್ರಿಕ ಸಹಾಯಕರು/ಸಹಾಯಕ ಅಭಿಯಂತರರು (ಡಿಆರ್‌ಡಿಎ ಕೋಶ) | 11400–21600 | 1 |
| 7 | I ಅಧೀಕ್ಷಕರು (ಡಿಆರ್‌ಡಿಎ ಕೋಶ) | 10000–18150 | 1 |
| 8 | II ಲೆಕ್ಕಾಧೀಕ್ಷಕರು (ಡಿಆರ್‌ಡಿಎ ಕೋಶ) | 10800–20025 | 1 |
| 9 | ಕಿರಿಯ ಇಂಜಿನಿಯರ್ (ಡಿಆರ್‌ಡಿಎ ಕೋಶ) | 8825–16000 | 3 |
| 10 | ಪ್ರಥಮ ದರ್ಜೆ ಸಹಾಯಕರು (ಡಿಆರ್‌ಡಿಎ ಕೋಶ) | 7275–13350 | 8 |
| 11 | ಶೀಘ್ರಲಿಪಿಗಾರರು (ಡಿಆರ್‌ಡಿಎ ಕೋಶ) | 7275–13350 | 1 |

| | | | |
|---|---|---|---|
| 12 | ದ್ವಿತೀಯ ದರ್ಜೆ ಸಹಾಯಕರು (ಡಿಆರ್‌ಡಿಎ ಕೋಶ) | 5800–10500 | 7 |
| 13 | ಬೆರಳಚ್ಚುಗಾರರು (ಡಿಆರ್‌ಡಿಎ ಕೋಶ) | 5800–10500 | 4 |
| 14 | ವಾಹನ ಚಾಲಕರು (ಡಿಆರ್‌ಡಿಎ ಕೋಶ) | 5800–10500 | 3 |
| 15 | ಗ್ರೂಪ್ 'ಡಿ' (ಡಿಆರ್‌ಡಿಎ ಕೋಶ) | 4800–7275 | 4 |
| | | **ಒಟ್ಟು** | **38** |

**ಎಸ್. ಯು. ಶಿವಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

ಪಿ.ಆರ್. ನಂ. 2943

## ವಸತಿ ಸಚಿವಾಲಯ

**ವಿಷಯ** : ಉಳ್ಳಾಲ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ

**ಓದಲಾಗಿದೆ** : ಸರ್ಕಾರದ ಆದೇಶ ಸಂ. ವಇ 42 ಹೆಚ್‌ಎಎಂ 1999, ದಿನಾಂಕ 10–05–2000

**ಪ್ರಸ್ತಾವನೆ :**

ಸರ್ಕಾರವು ರಾಜ್ಯದ ವಿವಿಧ ನಗರ ಸ್ಥಳೀಯ ಸಂಸ್ಥೆಗಳಲ್ಲಿ ನಗರ/ಪಟ್ಟಣ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ರಚಿಸಲು ಆದೇಶಿಸಿದೆ. ಕೆಲವು ಸ್ಥಳೀಯ ಸಂಸ್ಥೆಗಳಲ್ಲಿ ಅಧಿಕಾರೇತರ ಸದಸ್ಯರ ನಾಮನಿರ್ದೇಶನವಾಗಬೇಕಾಗಿದ್ದು, ಇಂಥ ಸ್ಥಳೀಯ ಸಂಸ್ಥೆಗಳಲ್ಲಿ ನಗರ/ಪಟ್ಟಣ ಆಶ್ರಯ ಸಮಿತಿ ಕಾರ್ಯನಿರ್ವಹಿಸುತ್ತಿಲ್ಲ. ನಗರ ಆಶ್ರಯ ಯೋಜನೆಯಡಿಯಲ್ಲಿ ಫಲಾನುಭವಿಗಳ ಆಯ್ಕೆ ತಕ್ಷಣವೇ ಪ್ರಾರಂಭವಾಗಬೇಕಾಗಿರುವುದರಿಂದ, ಅಧಿಕಾರೇತರ ಸದಸ್ಯರ ನಾಮನಿರ್ದೇಶನ ಬಾಕಿ ಇಟ್ಟು, ಈ ಕೆಳಗಿನಂತೆ ನಗರ/ಪಟ್ಟಣ ಆಶ್ರಯ ಸಮಿತಿ ರಚಿಸಿ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಇ 101 ಹೆಚ್‌ಎಎಸ್ 2010 (P1), ಬೆಂಗಳೂರು, ದಿನಾಂಕ: 19–10–2010**

ಉಳ್ಳಾಲ ನಗರ ಆಶ್ರಯ ಸಮಿತಿಯನ್ನು ಈ ಕೆಳಕಂಡಂತೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಪುನರಚಿಸಲಾಗಿದೆ.

| | | |
|---|---|---|
| 1 | ವಿಧಾನ ಸಭಾ ಕ್ಷೇತ್ರವನ್ನು ಪ್ರತಿನಿಧಿಸುವ ವಿಧಾನ ಸಭಾ ಸದಸ್ಯರು | ಅಧ್ಯಕ್ಷರು |
| 2 | ಆ ಪ್ರದೇಶದ ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 3 | ಸ್ಥಳೀಯ ಸಂಸ್ಥೆಯ ಮಹಾಪೌರರು/ಅಧ್ಯಕ್ಷರು ಅಥವಾ ಅವರ ಪ್ರತಿನಿಧಿ | ಸದಸ್ಯರು |
| 4 | ಸಂಬಂಧಪಟ್ಟ ಕಂದಾಯ ವಿಭಾಗದ ಉಪ ವಿಭಾಗಾಧಿಕಾರಿ | ಸದಸ್ಯರು |
| 5 | ತಾಲ್ಲೂಕಿನ ತಹಶೀಲ್ದಾರರು | ಸದಸ್ಯರು |
| 6 | ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಾಹಕ ಅಧಿಕಾರಿ | ಸದಸ್ಯರು |
| 7 | ಸ್ಥಳೀಯ ಸಂಸ್ಥೆಯ ಮುಖ್ಯಾಧಿಕಾರಿ ಅಥವಾ ಆಯುಕ್ತರು | ಸದಸ್ಯ ಕಾರ್ಯದರ್ಶಿ |

ಸಮಿತಿಯ ಅಧಿಕಾರ ಮತ್ತು ಕರ್ತವ್ಯಗಳ ಬಗ್ಗೆ ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿ ನೀಡಿದ ಮಾರ್ಗದರ್ಶಿಕೆಗಳನ್ನು ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ. ವಿ. ಕೊಂಗವಾಡ**
ಸರ್ಕಾರದ ಕಾರ್ಯದರ್ಶಿ
ವಸತಿ ಇಲಾಖೆ

ಪಿ.ಆರ್. ನಂ. 2944

## ನಗರಾಭಿವೃದ್ಧಿ ಸಚಿವಾಲಯ

**ವಿಷಯ** : ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಮಿಲ್ಲರ್ ಟ್ಯಾಂಕ್ ಬೆಡ್‌ನಲ್ಲಿ ನಿವೇಶನ ಸಂಖ್ಯೆ: 16ಜಿ ರಲ್ಲಿ 125X130+135/2 ವಿಸ್ತೀರ್ಣದ ಮತ್ತು 16ಎನ್ ರಲ್ಲಿ 125X125+130/2 ಅಡಿ ವಿಸ್ತೀರ್ಣದ ಜಾಗವನ್ನು "ALLIANCE FRANCAISE de Bangalore' ಸಂಸ್ಥೆಗೆ ನೀಡಲಾಗಿರುವ ಗುತ್ತಿಗೆ ಅವಧಿಯನ್ನು ನವೀಕರಿಸುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಎಂಎ 295 ಎಂಎನ್‌ಜಿ 77, ದಿನಾಂಕ 02–05–1979

2) ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಇವರ ಪತ್ರ ಸಂಖ್ಯೆ: ಎ3(2)/ಪಿ.ಆರ್/03/08–09, ದಿನಾಂಕ 21–08–2009.

***

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯ ಮಿಲ್ಲರ್ ಟ್ಯಾಂಕ್ ಬೆಡ್‌ನಲ್ಲಿ "ALLIANCE FRANCAISE de Bangalore' ರವರಿಗೆ ನಿವೇಶನ ಸಂಖ್ಯೆ: 16ಜಿ ರಲ್ಲಿ 125X130+135/2 ವಿಸ್ತೀರ್ಣದ ಮತ್ತು 16ಎನ್ ರಲ್ಲಿ 125X125+130/2 ಅಡಿ ವಿಸ್ತೀರ್ಣದ ಜಾಗವನ್ನು ಪ್ರತಿ ವರ್ಷಕ್ಕೆ ರೂ. 500–00 ಗಳಂತೆ ದರವನ್ನು ನಿಗಧಿಪಡಿಸಿ 30 ವರ್ಷಗಳ ಅವಧಿಗೆ ಗುತ್ತಿಗೆಗೆ ನೀಡಲಾಗಿದ್ದು, ಗುತ್ತಿಗೆ ಅವಧಿಯು ದಿನಾಂಕ 01–05–2009ರಂದು ಮುಕ್ತಾಯಗೊಂಡಿರುತ್ತದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ 21–08–2009ರ ಬಿ.ಬಿ.ಎಂ.ಪಿ. ಆಯುಕ್ತರ ಪತ್ರದಲ್ಲಿ ಸಂಸ್ಥೆಯು ಗುತ್ತಿಗೆ ನೀಡಿದ ಜಾಗದಲ್ಲಿ ಅಂತರರಾಷ್ಟ್ರೀಯ ಕಟ್ಟಡವನ್ನು ನಿರ್ಮಿಸಿ ಸುಮಾರು 3000 ಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಫ್ರೆಂಚ್ ಭಾಷಾ ತರಬೇತಿ ನೀಡುತ್ತಿದೆ. ಜೊತೆಗೆ ಇತರೆ ವೈಜ್ಞಾನಿಕ

ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳನ್ನು ಪ್ರೋತ್ಸಾಹಿಸುತ್ತಿದೆ. ಅಟಾಷೆ ಫಾರ್ ಸೈನ್ಸ್ ಅಂಡ್ ಟೆಕ್ನಾಲಜಿ ಕಛೇರಿಯು ಈ ಕೇಂದ್ರದ ಅಂತರ್ಗತ ಭಾಗವಾಗಿದ್ದು. ಭಾರತೀಯ ವಿಜ್ಞಾನ ಸಂಸ್ಥೆ, ದಿ ಇನ್ಸ್‌ಸ್ಟಿಟ್ಯೂಟ್ ಆಫ್ ಅಡ್ವಾನ್ಸ್ಡ್ ಸ್ಟಡೀಸ್ ಮುಂತಾದ ಪ್ರತಿಷ್ಠಿತ ಸಂಸ್ಥೆಗಳ ಸಹಭಾಗಿತ್ವದಲ್ಲಿ ಉಪನ್ಯಾಸ ಕಾರ್ಯಕ್ರಮಗಳು, ಕಾರ್ಯಾಗಾರಗಳನ್ನು ಆಯೋಜಿಸುತ್ತಿದೆ. ಅದಲ್ಲದೆ ಯೋಗ, ತಾಯ–ಚಿ, ನೃತ್ಯ ರೂಪಕಗಳ ತರಗತಿಗಳು ಮುಂತಾದ ಚಟುವಟಿಕೆಗಳನ್ನು ಆಯೋಜಿಸುತ್ತಿದೆ. ಈ ಸಂಸ್ಥೆಯು ವರ್ಷವಿಡೀ ಪ್ರದರ್ಶನಗಳು, ಸಂಗೀತ ಕಛೇರಿಗಳು, ನಾಟಕಗಳು, ಚಲನಚಿತ್ರೋತ್ಸವ ಮುಂತಾದ ಕಾರ್ಯಕ್ರಮಗಳನ್ನು ಆಯೋಜಿಸುತ್ತಿದ್ದು, ಇವು ಕರ್ನಾಟಕ ಹಾಗೂ ಫ್ರಾನ್ಸ್ ನಡುವೆ, ಭಾರತ ಮತ್ತು ಫ್ರಾನ್ಸ್ ನಡುವೆ, ವಿಶ್ವದ ಇತರೆ ದೇಶಗಳೊಂದಿಗೆ ಉತ್ತಮ ಸಂಬಂಧ ನಿರ್ಮಿಸಿಕೊಳ್ಳಲು ಸಹಕಾರಿಯಾಗಿದೆ. ಬೆಂಗಳೂರು ದೇಶದ ಪ್ರಮುಖ ಮಾಹಿತಿ ತಂತ್ರಜ್ಞಾನ, ವೈಜ್ಞಾನಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳ ಮಹತ್ವದ ಸ್ಥಳವೆನಿಸಿದ್ದು ಸಂಸ್ಥೆಯ ಕಾರ್ಯಚಟುವಟಿಕೆಗಳಿಂದ ವಿಶ್ವದ ಇತರ ದೇಶಗಳೊಡನೆ ಬೆಂಗಳೂರು ನಗರ ಶೈಕ್ಷಣಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ಬಾಂಧವ್ಯವು ವೃದ್ಧಿಗೊಳ್ಳಲು ಸಹಕಾರಿಯಾಗಬಹುದು ಎಂಬ ಅಂಶ ಸಹ ವ್ಯಕ್ತವಾಗಿದೆ. ಸ್ಥಳದಲ್ಲಿ ಈಗಾಗಲೇ ನಿರ್ಮಿಸಿರುವ ಕಟ್ಟಡದಲ್ಲಿ ಸಾಂಸ್ಕೃತಿಕ ಚಟುವಟಿಕೆಗಳನ್ನು ಇನ್ನೂ ಪರಿಣಾಮಕಾರಿಯಾಗಿ ಮುಂದುವರೆಸಿದಲ್ಲಿ ಫ್ರಾನ್ಸ್ ಮತ್ತು ಭಾರತದ ನಡುವೆ ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಬಾಂಧವ್ಯ ಇನ್ನಷ್ಟು ಅಭಿವೃದ್ಧಿಗೊಳ್ಳಲು ಸಹಕಾರಿ ಆಗುತ್ತದೆ. ಕಳೆದ 30 ವರ್ಷಗಳ ಅವಧಿಯಲ್ಲಿ ಮಾರುಕಟ್ಟೆ ದರವು ಅತ್ಯಂತ ಗರಿಷ್ಠ ಮಟ್ಟದಲ್ಲಿ ಇದ್ದು, ಅದರಂತೆ ಲೆಕ್ಕಾಚಾರ ಮಾಡಿದಾಗ ಗುತ್ತಿಗೆ ದರವು ಮಾಹೆಯಾನ ರೂ. 12,89,167–00 ಗಳಾಗುತ್ತಿದ್ದು, ಅದನ್ನು ಪಾವತಿಸಲು ಸಂಸ್ಥೆಯು ಬಲಿಷ್ಠವಾಗಿಲ್ಲ ಎಂಬುದನ್ನು ಮತ್ತು ಇಂತಹುದೇ ಲಾಭರಹಿತ ಚಟುವಟಿಕೆಗಳನ್ನು ಹಮ್ಮಿಕೊಂಡಿರುವ ಉದಯಭಾನು ಕಲಾ ಸಂಘ, ಕೆಂಪೇಗೌಡ ನಗರ ಮತ್ತು 51ನೇ ವಾರ್ಡಿನ ಕಟ್ಟೆಬಳಗಕ್ಕೂ ಕೂಡ ಮಾರುಕಟ್ಟೆ ದರದಂತೆ ನೀಡದೆ ರಿಯಾಯಿತಿ ದರದಲ್ಲಿ ನೀಡಿರುವ ಪೂರ್ವ ನಿದರ್ಶನವನ್ನು ಗಮನದಲ್ಲಿಟ್ಟುಕೊಂಡು ವರ್ಷಕ್ಕೆ ಕನಿಷ್ಠ ರೂ. 1000/– ಗಳಂತೆ ಗುತ್ತಿಗೆ ದರವನ್ನು ಹೆಚ್ಚಿಸುವ ಅನುಪಾತದಂತೆ 30 ವರ್ಷಗಳು ಕಳೆದಿರುವುದರಿಂದ ವಾರ್ಷಿಕವಾಗಿ ರೂ. 30,000/–ಗಳನ್ನು ನಿಗಧಿಪಡಿಸಿ ಕರ್ನಾಟಕ ಮುನ್ಸಿಪಲ್ ಕಾರ್ಪೋರೇಷನ್ ಕಾಯ್ದೆ 1976ರ ಕಲಂ 176(6) (b) (ii) ರನ್ವಯ ಪಾಲಿಕೆಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 3 ವರ್ಷಗಳಿಗೆ ಮಿತಿಗೊಳಿಸಿ ನವೀಕರಿಸಲು ಮತ್ತು ಮುಂದಿನ 27 ವರ್ಷಗಳ ಅವಧಿ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲು ಪಾಲಿಕೆಯ ಆಡಳಿತಾಧಿಕಾರಿಗಳು ನಿರ್ಣಯಿಸಿರುವುದರಿಂದ ಹಾಗು ಸಂಸ್ಥೆಯು ಸಂಪೂರ್ಣವಾಗಿ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನು ಹಮ್ಮಿಕೊಂಡು ಅಂತರರಾಷ್ಟ್ರೀಯ ಭಾಂದವ್ಯ ಅಭಿವೃದ್ಧಿಗೊಳಿಸಲು ಸಹಕಾರಿಯಾಗುವುದರಿಂದ ಮುಂದಿನ 30 ವರ್ಷಗಳ ಪೈಕಿ 3 ವರ್ಷದ ಅವಧಿಗೆ ಕನಿಷ್ಠ ವಾರ್ಷಿಕ ದರವಾಗಿ ರೂ. 30,000/– ಗಳನ್ನು ನಿಗಧಿಪಡಿಸಿರುವ ಕಾರಣ ಉಳಿದ 27 ವರ್ಷ ಅವಧಿ ಬಗ್ಗೆಯೂ ಸಹ ರೂ. 30,000/– ಗಳಂತೆ ವಾರ್ಷಿಕ ಗುತ್ತಿಗೆ ದರ ನಿಗಧಿಪಡಿಸಿ ಆದೇಶ ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಹಾಗೂ ಸಂಸ್ಥೆಯು ಅಂತರ್‌ರಾಷ್ಟ್ರೀಯ ಬಾಂದವ್ಯವನ್ನು ಬೆಸೆಯುವ ಕಾರ್ಯವನ್ನು ಮಾಡುತ್ತಿರುವ ಅಂಶವನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 165 ಎಂಎನ್‌ಜಿ 2009, ಬೆಂಗಳೂರು, ದಿನಾಂಕ: 29–11–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಮಿಲ್ಲರ್ ಟ್ಯಾಂಕ್ ಬೆಡ್‌ನಲ್ಲಿ "ALLIANCE FRANCAISE de Bangalore' ಸಂಸ್ಥೆಗೆ ಗುತ್ತಿಗೆ ಆಧಾರದ ಮೇಲೆ ನೀಡಿರುವ ನಿವೇಶನ ಸಂಖ್ಯೆ: 16ಜಿ ರಲ್ಲಿ 125X130+135/2 ಅಡಿ ವಿಸ್ತೀರ್ಣ ಮತ್ತು 16ಎನ್ ರಲ್ಲಿ 125X125+130/2 ಅಡಿ ವಿಸ್ತೀರ್ಣದ ಜಾಗವನ್ನು ವಾರ್ಷಿಕ ರೂ. 30,000/–ಗಳ (ಮೂವತ್ತು ಸಾವಿರ ರೂಪಾಯಿಗಳು ಮಾತ್ರ) ಗುತ್ತಿಗೆ ದರದಂತೆ ಪ್ರತಿ ವರ್ಷ ರೂ. 1,000/–ಗಳನ್ನು (ಒಂದು ಸಾವಿರ ರೂಪಾಯಿಗಳು ಮಾತ್ರ) ಹೆಚ್ಚಿಸುವ ಷರತ್ತಿಗೊಳಪಟ್ಟು ದಿನಾಂಕ 01–05–2009 ರಿಂದ 30 (ಮೂವತ್ತು) ವರ್ಷಗಳ ಅವಧಿಗೆ ಗುತ್ತಿಗೆ ಅವಧಿಯನ್ನು ನವೀಕರಿಸಲು ಸರ್ಕಾರದ ಅನುಮೋದನೆ ನೀಡಿದೆ.

ಸಂಸ್ಥೆಗೆ ಈ ಹಿಂದೆ ಗುತ್ತಿಗೆ ನೀಡಲಾದ ಸಂದರ್ಭದಲ್ಲಿ ಸರ್ಕಾರ ಹಾಗೂ ಪಾಲಿಕೆಯು ಆಗಿಂದಾಗ್ಗೆ ವಿಧಿಸಿರುವ ಷರತ್ತು ಮತ್ತು ನಿಬಂಧನೆಗಳು ಯಥಾವತ್ತಾಗಿ ಅನ್ವಯಿಸುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 538 ವೆಚ್ಚ 9/2010, ದಿನಾಂಕ 17–08–2010ರಲ್ಲಿನ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ರೇಣುಕಾರಾಧ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

ಪಿ.ಆರ್. ನಂ. 2945

## ಸಹಕಾರ ಸಚಿವಾಲಯ

**ವಿಷಯ :** ರಾಜ್ಯದಲ್ಲಿ ಕೃಷಿ ಸಾಲದ ಮೇಲೆ ಅಧಿಕ ಸಹಾಯಧನ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸಿಒ 66 ಸಿಎಲ್‌ಎಸ್ 2008, ದಿನಾಂಕ : 27–08–2008.
2. ಸರ್ಕಾರದ ಆದೇಶ ಸಂಖ್ಯೆ : ಸಿಒ 58 ಸಿಎಲ್‌ಎಸ್ 2009, ದಿನಾಂಕ : 20–08–2009.
3. ಸಹಕಾರ ಸಂಘಗಳ ನಿಬಂಧಕರ ಪತ್ರಸಂಖ್ಯೆ : ಸಿಆರ್‌ಡಿ/02/ಕೆಆರ್‌ಎಫ್/2010–11, ದಿನಾಂಕ : 16–09–2010.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಸಹಕಾರಿ ಪತ್ತಿನ ಸಂಸ್ಥೆಗಳು ರಾಜ್ಯದ ರೈತರಿಗೆ ಶೇಕಡಾ 3ರ ಬಡ್ಡಿ ದರದಲ್ಲಿ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲಗಳನ್ನು ಕೆಲವು ಷರತ್ತುಗಳಿಗೊಳಪಟ್ಟು ಒದಗಿಸಲು ಮಂಜೂರಾತಿ ನೀಡಲಾಗಿರುತ್ತದೆ. ಮೇಲೆ ಓದಲಾದ (2)ರ ಆದೇಶದಲ್ಲಿ 2009–10ನೇ ಸಾಲಿನಲ್ಲಿ ಸಹಕಾರಿ ಪತ್ತಿನ ಸಂಸ್ಥೆಗಳು ರಾಜ್ಯದ ರೈತರಿಗೆ ಶೇಕಡಾ 3ರ ಬಡ್ಡಿ ದರದಲ್ಲಿ ನೀಡಿದ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ/ಕೃಷಿ ಸಂಬಂಧಿತ ಸಾಲಗಳ ವಸೂಲಾತಿ ಆಧಾರದ ಮೇಲೆ ಸರ್ಕಾರವು ಭರಿಸಿಕೊಡುವ ಬಡ್ಡಿ ಸಹಾಯಧನದ ಪ್ರಮಾಣವನ್ನು ನಿಗದಿಪಡಿಸಲಾಗಿರುತ್ತದೆ. ಮೇಲೆ ಓದಲಾದ (3)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು, ಸಹಕಾರಿ ಹಣಕಾಸು ಸಂಸ್ಥೆಗಳಿಂದ ರೈತರು ಪಡೆಯುವ

ಕೃಷಿ ಸಾಲಕ್ಕೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರವು ಕೃಷಿ ಸಾಲದ ಮೇಲೆ ಅಧಿಕ ಬಡ್ಡಿ ಸಹಾಯಧನ 2009–10ನೇ ಸಾಲಿಗೆ ಶೇ. 1 ಮತ್ತು 2010–11ನೇ ಸಾಲಿಗೆ ಶೇ. 2 ಎಂದು ಘೋಷಣೆ ಮಾಡಿರುವುದರಿಂದ ಹಾಗೂ ಬಡ್ಡಿ ಸಹಾಯಧನ ಪ್ರಮಾಣವನ್ನು 2009–10ನೇ ಸಾಲಿಗೆ ಶೇ. 6.5 ಎಂದು ನಿಗದಿಪಡಿಸಿದಲ್ಲಿ ಪ್ಯಾಕ್ಸ್‌ಗಳ ಮತ್ತು ಡಿಸಿಸಿ ಬ್ಯಾಂಕುಗಳ ಆರ್ಥಿಕ ಪರಿಸ್ಥಿತಿಯ ಮೇಲೆ ಪ್ರತಿಕೂಲ ಪರಿಣಾಮ ಉಂಟಾಗುತ್ತದೆಂದು, ಈ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರೊಂದಿಗೆ ಚರ್ಚಿಸಿ ಅಂತಿಮ ತೀರ್ಮಾನ ತೆಗೆದುಕೊಳ್ಳುವಂತೆ ಕೋರಿರುತ್ತಾರೆ. ಸದರಿ ಕೋರಿಕೆಯನ್ನು ಪರಿಗಣಿಸಿ ಸರ್ಕಾರವು ಭರಿಸಿಕೊಡುವ ಬಡ್ಡಿ ಸಹಾಯಧನದ ಪ್ರಮಾಣವನ್ನು ನಿಗದಿಪಡಿಸಲು ತೀರ್ಮಾನಿಸಲಾಗಿರುತ್ತದೆ.

ಆದುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 195 ಸಿಎಲ್ಎಸ್ 2010, ಬೆಂಗಳೂರು, ದಿನಾಂಕ : 27ನೇ ನವೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ರಾಜ್ಯ ಸರ್ಕಾರ ನೀಡುತ್ತಿರುವ ಸಹಾಯಧನದ ಜೊತೆಗೆ ಕೇಂದ್ರ ಸರ್ಕಾರ ನೀಡುತ್ತಿರುವ ಅಧಿಕ ಬಡ್ಡಿ ಸಹಾಯಧನವನ್ನು ಸಹ ರೈತರಿಗೆ ತಲುಪಿಸಲು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಬಡ್ಡಿ ಸಹಾಯಧನವನ್ನು ನಿಗದಿಪಡಿಸಲಾಗಿರುತ್ತದೆ.

| ವರ್ಷ | ರಾಜ್ಯ ಸರ್ಕಾರ ನೀಡುತ್ತಿರುವ ಸಾಮಾನ್ಯ ಸಹಾಯಧನ | ರಾಜ್ಯ ಸರ್ಕಾರದ ಅಧಿಕ ಸಹಾಯಧನ | ಒಟ್ಟು ಸಹಾಯಧನ |
|---|---|---|---|
| 2009–10 | ಶೇ. 6.5 | ಶೇ. 1 | ಶೇ. 7.5 |
| 2010–11 | ಶೇ. 6.5 | ಶೇ. 1.25 | ಶೇ. 7.75 |

**ಷರತ್ತುಗಳು :–**

1. ಸಹಕಾರಿ ಹಣಕಾಸು ಸಂಸ್ಥೆಗಳು ಕೇಂದ್ರ ಸರ್ಕಾರ ರೈತರುಗಳಿಗೆ ನೀಡುವ ಸಹಾಯಧನಗಳಿಗಾಗಿ ನಬಾರ್ಡ್/ಕೇಂದ್ರ ಸರ್ಕಾರಕ್ಕೆ ಕ್ಲೇಮು ಸಲ್ಲಿಸಿದಲ್ಲಿ ಮಾತ್ರ ಕ್ಲೇಮು ಮೊತ್ತಕ್ಕೆ ಸಂವಾದಿಯಾಗಿ (corresponding) ರಾಜ್ಯ ಸರ್ಕಾರವು ಅಧಿಕ ಸಹಾಯಧನವನ್ನು ಪಾವತಿಸಲಾಗುವುದು.
2. ನಬಾರ್ಡ್/ಕೇಂದ್ರ ಸರ್ಕಾರದಿಂದ ಅಧಿಕ ಸಹಾಯಧನ ಮೊತ್ತವು ರೈತರುಗಳ ಖಾತೆಗೆ ಸೇರಲಿದ್ದು, ರಾಜ್ಯ ಸರ್ಕಾರದ ಅಧಿಕ ಸಹಾಯಧನ ಮೊತ್ತವು ಸಹಕಾರಿ ಹಣಕಾಸು ಸಂಸ್ಥೆಗಳಿಗೆ ಸೇರಲಿದೆ.

ಮೇಲೆ ಓದಲಾದ (1)ರ ಆದೇಶದಲ್ಲಿನ ಉಳಿದ ಷರತ್ತುಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 419 ವೆಚ್ಚ–2/2010 ದಿನಾಂಕ :19–11–2010ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ

ಸಹಕಾರ ಇಲಾಖೆ

ಪಿ.ಆರ್. 2969

## ಇಂಧನ ಸಚಿವಾಲಯ

**ವಿಷಯ :** ನವೀಕರಿಸಬಹುದಾದ ಇಂಧನ ಮೂಲಗಳ ವಿದ್ಯುತ್ ಯೋಜನೆಯಿಂದ ವಿದ್ಯುತ್ ಸರಬರಾಜು ಕಂಪನಿಗಳಿಗೆ ವಿದ್ಯುತ್ ಸರಬರಾಜು ಮಾಡುವ ಬಗ್ಗೆ ವಿದ್ಯುತ್ ಖರೀದಿ ಒಡಂಬಡಿಕೆಯನ್ನು (PPA) assign ಮಾಡಲು ಸಮಿತಿಯನ್ನು ರಚಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 354 ಎನ್‌ಸಿಇ 2008, ದಿನಾಂಕ : 19–01–2010.
2. ತಿದ್ದುಪಡಿ ಆದೇಶ ಸಂಖ್ಯೆ : ಇಎನ್ 76 ಇಎಂಸಿ–2, 2010, ದಿನಾಂಕ : 06–05–2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1) ಮತ್ತು (2)ರ ಆದೇಶಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ನೀತಿ 2009–14ನ್ನು ಘೋಷಿಸಿದೆ. ಈ ನೀತಿಯ ಪ್ರಕಾರ, ಮುಂದಿನ 5 ವರ್ಷಗಳಲ್ಲಿ ನವೀಕರಿಸಬಹುದಾದ ಇಂಧನ ಮೂಲಗಳಿಂದ ಸುಮಾರು 4200 ಮೆಗಾ ವ್ಯಾಟ್ ವಿದ್ಯುತ್ ಸಾಮರ್ಥ್ಯವನ್ನು ರಾಜ್ಯದ ವಿದ್ಯುತ್ ಜಾಲಕ್ಕೆ ಸೇರಿಸುವ ಗುರಿಯನ್ನು ಹೊಂದಲಾಗಿದೆ. ನವೀಕರಿಸಬಹುದಾದ ಇಂಧನ ಮೂಲಗಳಾದ ಪವನ ವಿದ್ಯುತ್, ಕಿರುಜಲ ವಿದ್ಯುತ್, ಸಹವಿದ್ಯುತ್, ಬಯೋಮಾಸ್ ಆಧಾರಿತ ವಿದ್ಯುತ್ ಉತ್ಪಾದನಾ ಕಂಪನಿಗಳಿಂದ ಎಲ್ಲಾ ವಿತರಣಾ ಕಂಪನಿಗಳು ವಿದ್ಯುತ್ತನ್ನು ಖರೀದಿಸುತ್ತಿವೆ. ಈಗಾಗಲೇ ವಿತರಣಾ ಕಂಪನಿಗಳು ಹಲವು ವಿದ್ಯುತ್ ಉತ್ಪಾದನಾ ಸಂಸ್ಥೆಗಳೊಂದಿಗೆ ವಿದ್ಯುತ್ ಖರೀದಿ ಒಡಂಬಡಿಕೆಯನ್ನು ಮಾಡಿಕೊಂಡಿದ್ದರೂ ಅವುಗಳ ಆರ್ಥಿಕ ನಿರ್ವಹಣೆ ಸಮಾಧಾನಕರವಾಗಿರುವುದಿಲ್ಲ. ವಿದ್ಯುತ್ ಸಾಮರ್ಥ್ಯದ ಹೆಚ್ಚಳದ ಹಿನ್ನೆಲೆಯಲ್ಲಿ, ವಿದ್ಯುತ್ ಸರಬರಾಜು ಕಂಪನಿಗಳು ಬೃಹತ್ ವಿದ್ಯುತ್ ಯೋಜನೆಗಳಿಗೂ ಖರೀದಿ ಒಪ್ಪಂದಗಳಿಗೆ ಸಹಿ ಮಾಡುತ್ತಿದೆ. ವಿದ್ಯುತ್ ಸರಬರಾಜು ಕಂಪನಿಗಳ ಒಟ್ಟಾರೆ ಕಂದಾಯದ ಶೇಕಡ 90ರಷ್ಟು ಭಾಗವು ವಿದ್ಯುತ್ ಖರೀದಿಗೆ ಮೀಸಲಾಗುತ್ತಿದೆ.

ಈ ಹಿನ್ನೆಲೆಯಲ್ಲಿ ಭವಿಷ್ಯದಲ್ಲಿ ಉದ್ಭವಿಸಬಹುದಾದ ಆರ್ಥಿಕ ಸಮಸ್ಯೆಯ ದೃಷ್ಟಿಯಿಂದ ನವೀಕರಿಸಬಹುದಾದ ಇಂಧನ ಯೋಜನೆಗಳ ಹಂಚಿಕೆ, ವಿದ್ಯುತ್ ಸರಬರಾಜು ಕಂಪನಿವಾರು ವಿಂಗಡಣೆಯ ಬಗ್ಗೆ ಸಮಗ್ರವಾದ ರೂಪುರೇಷೆಯನ್ನು ತರುವ ನಿಟ್ಟಿನಲ್ಲಿ ನವೀಕರಿಸಬಹುದಾದ ಇಂಧನ ಮೂಲಗಳ ವಿದ್ಯುತ್ ಯೋಜನೆಯಿಂದ ವಿದ್ಯುತ್ ಸರಬರಾಜು ಕಂಪನಿಗಳಿಗೆ ವಿದ್ಯುತ್ ಸರಬರಾಜು ಮಾಡುವ ಬಗ್ಗೆ ವಿದ್ಯುತ್ ಖರೀದಿ ಒಡಂಬಡಿಕೆಯನ್ನು assign ಮಾಡಲು ಪ್ರಧಾನ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ರಚಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 436 ಎನ್‌ಸಿಇ 2010, ಬೆಂಗಳೂರು, ದಿನಾಂಕ : 14ನೇ ಡಿಸೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ನವೀಕರಿಸಬಹುದಾದ ಇಂಧನ ಮೂಲಗಳ ವಿದ್ಯುತ್ ಯೋಜನೆಯಿಂದ ವಿದ್ಯುತ್ ಸರಬರಾಜು ಕಂಪನಿಗಳಿಗೆ ವಿದ್ಯುತ್ ಸರಬರಾಜು ಮಾಡುವ ಬಗ್ಗೆ ವಿದ್ಯುತ್ ಖರೀದಿ ಒಡಂಬಡಿಕೆಯನ್ನು assign ಮಾಡಲು ಈ ಕೆಳಕಂಡ ಸದಸ್ಯರನ್ನೊಳಗೊಂಡ ಸಮಿತಿಯನ್ನು ರಚಿಸಲಾಗಿದೆ :-

| | | |
|---|---|---|
| 1 | ಸರ್ಕಾರದ ಪ್ರಧಾನ ಕಾರ್ಯದರ್ಶಿ,<br>ಇಂಧನ ಇಲಾಖೆ | ಅಧ್ಯಕ್ಷರು |
| 2 | ವ್ಯವಸ್ಥಾಪಕ ನಿರ್ದೇಶಕರು,<br>ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ | ಸದಸ್ಯರು |
| 3 | ವ್ಯವಸ್ಥಾಪಕ ನಿರ್ದೇಶಕರು,<br>ಪವರ್ ಕಂಪನಿ ಆಫ್ ಕರ್ನಾಟಕ ಲಿಮಿಟೆಡ್ | ಸದಸ್ಯರು |
| 4 | ಎಲ್ಲಾ ವಿದ್ಯುತ್ ಸರಬರಾಜು ಕಂಪನಿಯ ವ್ಯವಸ್ಥಾಪಕ ನಿರ್ದೇಶಕರು ಅಥವಾ ಅವರ ಪ್ರತಿನಿಧಿ | ಸದಸ್ಯರು |
| 5 | ಸರ್ಕಾರದ ಉಪ ಕಾರ್ಯದರ್ಶಿ,<br>ಇಂಧನ ಇಲಾಖೆ | ಸದಸ್ಯ-ಸಂಚಾಲಕರು |

ಸದರಿ ಸಮಿತಿಯು ತಿಂಗಳಲ್ಲಿ ಒಂದು ಬಾರಿ ಸಭೆ ಸೇರಿ, ವಿದ್ಯುತ್ ಖರೀದಿ ಒಡಂಬಡಿಕೆಯನ್ನು assign ಮಾಡುವ ಬಗ್ಗೆ ಕ್ರಮವಹಿಸುವುದು. ವಿದ್ಯುತ್ ಖರೀದಿ ಒಡಂಬಡಿಕೆಯನ್ನು assign ಮಾಡಲು ಪ್ರಸ್ತಾವನೆಗಳು ಲಭ್ಯವಿಲ್ಲದಿದ್ದಲ್ಲಿ, ವಿದ್ಯುತ್ ಖರೀದಿ ಒಡಂಬಡಿಕೆಗಳು ಲಭ್ಯವಾದಾಗ ಸಭೆಯನ್ನು ನಡೆಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2970

**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ॥ ಫ್ಲಾಕ್ಸ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್‌ನ ರದ್ದುಪಡಿಸಿರುವ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಅರೆಮಾದನಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಪೂರ್ವ ಸ್ಥಿತಿಗೆ ತಂದು, ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶ ವಿಸ್ತರಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಡಿಇ 122 ಎನ್‌ಸಿಇ 2001 ದಿನಾಂಕ : 29-11-2001.
2. ಸರ್ಕಾರಿ ಆದೇಶ ಸಂಖ್ಯೆ : ಡಿಇ 180 ಎನ್‌ಸಿಇ 2004 ದಿನಾಂಕ : 04-06-2004.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/08/ಎಸ್‌ಹೆಚ್‌ಪಿ/08/2029 ದಿನಾಂಕ : 2/3-12-2008.
4. ಕಾರಣ ಕೇಳುವ ನೋಟೀಸ್ ಸಂಖ್ಯೆ : ಇಎನ್ 517 ಎನ್‌ಸಿಇ 2008 ದಿನಾಂಕ: 27-12-2008.
5. ಸರ್ಕಾರಿ ಆದೇಶ ಸಂಖ್ಯೆ : ಇಎನ್ 517 ಎನ್‌ಸಿಇ 2008 ದಿನಾಂಕ : 08-05-2009.
6. ಮೆ॥ ಫ್ಲಾಕ್ಸ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರ ಮನವಿ ದಿನಾಂಕ: 06-06-2009.
7. ಸರ್ಕಾರದ ಪತ್ರ ಸಂಖ್ಯೆ : ಇಎನ್ 381 ಎನ್‌ಸಿಇ 2009 ದಿನಾಂಕ : 29-06-2009.
8. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/ಅರೆಮಾದನಹಳ್ಳಿ/2009/2116 ದಿನಾಂಕ : 29-06-2009/06-07-2009.
9. ಸರ್ಕಾರದ ಪತ್ರಗಳ ಸಂಖ್ಯೆ : ಇಎನ್ 381 ಎನ್‌ಸಿಇ 2009 ದಿನಾಂಕ : 30-07-2009 ಮತ್ತು 15-10-2009.
10. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ : ಕೆಆರ್‌ಇಡಿ/06/ಅರೆಮಾದನಹಳ್ಳಿ/2009/2904 ದಿನಾಂಕ 05/07-09-2009 ಮತ್ತು ಕೆಆರ್‌ಇಡಿ/06/ಅರೆಮಾದನಹಳ್ಳಿ/2009/3597 ದಿನಾಂಕ : 02/04-11-2009.
11. ಸರ್ಕಾರದ ಹಿಂಬರಹ ಸಂಖ್ಯೆ : ಇಎನ್ 381 ಎನ್‌ಸಿಇ 2009 ದಿನಾಂಕ : 07-01-2010.
12. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/ಅರೆಮಾದನಹಳ್ಳಿ ಕಿ.ಜಿ.ವಿ./2010/505 ದಿನಾಂಕ : 11/23-02-2010.
13. ದಿನಾಂಕ : 19-04-2010ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ನವೀಕರಿಸಬಹುದಾದ ಇಂಧನ ಯೋಜನೆಗಳ (ಪವನ/ಕಿರು ಜಲ) ಪರಿಶೀಲನಾ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಫ್ಲಾಕ್ಸ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರಿಗೆ ಹಾಸನ ಜಿಲ್ಲೆಯ ಅರಕಲಗೂಡು ತಾಲ್ಲೂಕಿನಲ್ಲಿ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಅರೆಮಾದನಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಒಡಂಬಡಿಕೆ ಮಾಡಿಕೊಂಡ ದಿನಾಂಕದಿಂದ 3 ವರ್ಷಗಳ ಅವಧಿಯಲ್ಲಿ ಅನುಷ್ಠಾನಗೊಳಿಸಲು ಮಂಜೂರು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಸದರಿ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 1.00 ಮೆಗಾ ವ್ಯಾಟ್‌ನಿಂದ 1.5 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಅನುಷ್ಠಾನಗೊಳಿಸಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಸದರಿ ಅಭಿವೃದ್ಧಿದಾರರಿಗೆ ಯೋಜನೆ ಹಂಚಿಕೆಯಾಗಿ 8 ವರ್ಷ ಕಳೆದರೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಪಡಿಸುವಂತೆ ಹಾಗೂ ಒಡಂಬಡಿಕೆಯನ್ನು ಮುಕ್ತಾಯಗೊಳಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಯೋಜನೆಯ ಅನುಷ್ಠಾನಕ್ಕಾಗಿ ಅನುಮತಿ ನೀಡಿ 8 ವರ್ಷ ಕಳೆದರೂ ಅನುಷ್ಠಾನನಿಟ್ಟಿನಲ್ಲಿ ಮೆ॥ ಫ್ಲಾಕ್ಸ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಯು ಯಾವುದೇ ಕ್ರಮ ಕೈಗೊಳ್ಳದೇ ಇರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದೆಂಬುದಕ್ಕೆ ಸಮಜಾಯಿಷಿಯನ್ನು ನೀಡುವಂತೆ ನೋಂದಾಯಿತ ಅಂಚೆ ಮೂಲಕ ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಆದೇಶದಲ್ಲಿ ಸರ್ಕಾರಿ ಆದೇಶ ಸಂಖ್ಯೆ : ಡಿಇ 122 ಎನ್‌ಸಿಇ 2001 ದಿನಾಂಕ : 29–11–2001 ಹಾಗೂ ಡಿಇ 180 ಎನ್‌ಸಿಇ 2004 ದಿನಾಂಕ : 4–6–2004ರಲ್ಲಿ ಮೆ॥ ಫ್ಲಾಕ್ಸ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಾಸನ ಜಿಲ್ಲೆಯ ಅರಕಲಗೂಡು ತಾಲ್ಲೂಕಿನಲ್ಲಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಅರೆಮಾದನಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ರದ್ದು ಪಡಿಸಲಾಗಿತ್ತು.

ಮೆ॥ ಫ್ಲಾಕ್ಸ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರ ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಮನವಿಯಲ್ಲಿ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಸಾಕಷ್ಟು ಪ್ರಗತಿ ಸಾಧಿಸಿದ್ದು, ರದ್ದುಪಡಿಸಿರುವ ಅರೆಮಾದನಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಪೂರ್ವಸ್ಥಿತಿಗೆ ತಂದು, ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು 36 ತಿಂಗಳುಗಳಿಗೆ ವಿಸ್ತರಿಸುವಂತೆ ಕೋರಿರುತ್ತಾರೆ. ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ಸರ್ಕಾರದ ಪತ್ರದಲ್ಲಿ ಅಭಿವೃದ್ಧಿದಾರರ ಮನವಿಯನ್ನು ಪರಿಶೀಲಿಸಿ, ಅಭಿಪ್ರಾಯದೊಂದಿಗೆ ವರದಿಯನ್ನು ಕಳುಹಿಸಿಕೊಡುವಂತೆ ವ್ಯವಸ್ಥಾಪಕ ನಿರ್ದೇಶಕರು, ಕ್ರೆಡಲ್‌ರವರನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (8)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಅಭಿವೃದ್ಧಿದಾರರ ಮನವಿಯನ್ನು ಪರಿಶೀಲಿಸಿ ಯೋಜನೆಯ ಜಮೀನಿಗೆ ಸಂಬಂಧಿಸಿದಂತೆ ಭೂಹಸ್ತಾಂತರ ಪ್ರಕ್ರಿಯೆಯು ಚಾಲನೆಯಲ್ಲಿರುವುದಾಗಿ ತಿಳಿಸಿ, ಪ್ರದೇಶವು ಹೇಮಾವತಿ ಜಲಾಶಯ ವ್ಯಾಪ್ತಿಗೆ ಒಳಪಡುವುದರಿಂದ ತಡವಾಗಿರುವುದಾಗಿ ತಿಳಿಸಿ ವರದಿ ನೀಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (9)ರ ಸರ್ಕಾರದ ಪತ್ರಗಳಲ್ಲಿ ಅರೆಮಾದನಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳ ಪರಿವೀಕ್ಷಣೆ ಮಾಡಿ, ಪರಿವೀಕ್ಷಣಾ ವರದಿಯೊಂದಿಗೆ ಸ್ಪಷ್ಟ ಅಭಿಪ್ರಾಯವನ್ನು ನೀಡುವಂತೆ ಕ್ರೆಡಲ್‌ನ ವ್ಯವಸ್ಥಾಪಕ ನಿರ್ದೇಶಕರನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (10)ರ ಪತ್ರಗಳಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಅರೆಮಾದನಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳ ಪರಿವೀಕ್ಷಣೆ ಮಾಡಿ ವರದಿ ನೀಡಿ ರದ್ದುಪಡಿಸಿರುವ ಅರೆಮಾದನಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಪೂರ್ವಸ್ಥಿತಿಗೆ ತರಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (11)ರ ಸರ್ಕಾರದ ಹಿಂಬರಹದಲ್ಲಿ ಕೆಳಕಂಡ ಕಾರಣಗಳನ್ನು ನೀಡಿ ಮೆ॥ ಫ್ಲಾಕ್ಸ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರ ದಿನಾಂಕ : 06–06–2009ರ ಮನವಿಯನ್ನು ತಿರಸ್ಕರಿಸಲಾಗಿದೆ ಎಂದು ತಿಳಿಸಲಾಗಿತ್ತು. :–

1. ಯೋಜನೆಯನ್ನು ಪುನರ್ ಹಂಚಿಕೆ ಮಾಡಲು ಯಾವುದೇ Valid grounds ಇರುವುದಿಲ್ಲ.
2. ಯೋಜನೆಯು ಹಂಚಿಕೆಯಾಗಿ 8 ವರ್ಷಗಳು ಕಳೆದರೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ತಮ್ಮ ಕಂಪನಿಯು ಸಾಧಿಸಿರುವುದಿಲ್ಲ.

ಮೇಲೆ ಓದಲಾದ ಕ್ರಮ ಸಂಖ್ಯೆ (12)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಅರೆಮಾದನಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯ ಪ್ರಸ್ತಾವನೆಯನ್ನು ಪುನಃ ಪರಿಶೀಲಿಸಿ ಅಭಿವೃದ್ಧಿದಾರರು ಯೋಜನೆಯ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಬಹುತೇಕ ಅನುಮೋದನೆಗಳನ್ನು ಪಡೆದಿದ್ದು ಯೋಜನೆಯನ್ನು ಪೂರ್ವಸ್ಥಿತಿಗೆ ತರಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (13)ರ ದಿನಾಂಕ : 19–04–2010ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ನವೀಕರಿಸಬಹುದಾದ ಇಂಧನ ಯೋಜನೆಗಳ (ಪವನ/ಕಿರು ಜಲ) ರಿವ್ಯೂ ಸಭೆಯಲ್ಲಿ ಕೆಳಕಂಡಂತೆ ನಿರ್ಣಯಿಸಲಾಗಿತ್ತು :–

"2. M/s Flax Hydro Energy Private Limited, 1.5 MW capacity, Aremadanahalli MHS, Aremadanahalli Village, Arkalagodu Taluk, Hassan District.

The proposal of M/s Flax Hydro Energy Private Limited, for restoration was discussed in the meeting based on the facts presented by the developer. The members present in the meeting observed that there has been an inordinate delay in implementation of the project by the developer. However, based on the facts presented by the developer, the members decided to restore the project by permitting the developer to have a final time extension for commissioning the project of 15 months time from the date of issue of GO, with a condition that the developer should furnish a bank guarantee of Rs. 10 Lakhs to KREDL with a cap that in case of project not being commissioned within the stipulated time, the entire amount of bank guarantee so furnished by the developer shall be forfeited to KREDL and transfer the amount to the account of Akshaya Shakthi Nidhi at KREDL and there on, the said project shall deemed to

be cancelled once for all. The above decision taken in the meeting was accepted by the developer present".

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 381 ಎನ್‌ಸಿಇ 2009, ಬೆಂಗಳೂರು, ದಿನಾಂಕ: 30–11–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ : ಇಎನ್ 517 ಎನ್‌ಸಿಇ 2008 ದಿನಾಂಕ : 08–05–2009ರಲ್ಲಿ ಮೆ॥ ಫ್ಲಾಕ್ಸ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರಿಗೆ ಹಾಸನ ಜಿಲ್ಲೆಯ ಅರಕಲಗೂಡು ತಾಲ್ಲೂಕಿನಲ್ಲಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಅರೆಮಾದನಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆಯನ್ನು ರದ್ದುಪಡಿಸಿರುವುದನ್ನು ಈ ಕೆಳಗಿನ ನಿಬಂಧನೆಗೊಳಪಟ್ಟು ಪೂರ್ವಸ್ಥಿತಿಗೆ ತರಲಾಗಿದೆ ಹಾಗೂ ಯೋಜನೆಯ ಅನುಷ್ಠಾನಕ್ಕಾಗಿ ಕೊನೆಯ ಅವಕಾಶವಾಗಿ ಈ ಆದೇಶ ಹೊರಡಿಸಿದ 15 ತಿಂಗಳುಗಳ ಒಳಗಾಗಿ ಯೋಜನೆಯನ್ನು ಪೂರ್ಣಗೊಳಿಸತಕ್ಕದ್ದು ಎಂಬ ಷರತ್ತಿಗೊಳಪಟ್ಟು ಕಾಲಾವಕಾಶ ವಿಸ್ತರಿಸಲಾಗಿದೆ :–

- The developer should furnish a bank guarantee of Rs. 10 Lakhs to KREDL with a cap that in case of project not being commissioned within the stipulated time, the entire amount of bank guarantee so furnished by the developer shall be forfeited to KREDL and there on the said project shall deemed to be cancelled once for all.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2971

**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ** : ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ತಳಕು ಹೋಬಳಿ ಉಳ್ಳರ್ತಿ ಕಾವಲ್ ಸ.ನಂ. 1ರಲ್ಲಿ 473–20 ಎಕರೆ ಹಾಗೂ ನಾಯಕನಹಟ್ಟಿ ಹೋಬಳಿ ಖುದಾಪುರ ಗ್ರಾಮದ ಸ.ನಂ. 47ರಲ್ಲಿ 100–00 ಎಕರೆ ಜಮೀನನ್ನು ಭಾರತೀಯ ಬಾಹ್ಯಾಕಾಶ ಸಂಶೋಧನಾ ಸಂಸ್ಥೆಗೆ (ಇಸ್ರೋ) ಇವರಿಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ** : ಜಿಲ್ಲಾಧಿಕಾರಿಗಳು ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ರವರ ಪತ್ರ ಸಂಖ್ಯೆ: ಎಲ್ ಎನ್ ಡಿ: ಸಿಆರ್/ 18/2010–11, ದಿನಾಂಕ 18–5–2010.

**ಪ್ರಸ್ತಾವನೆ :**

ಜಿಲ್ಲಾಧಿಕಾರಿಗಳು ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗರವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುತ್ತಾ, ಭಾರತೀಯ ಬಾಹ್ಯಾಕಾಶ ಸಂಶೋಧನಾ ಸಂಸ್ಥೆ (ಇಸ್ರೊ) ಪರಿಣಿತರ ತಂಡವು ಜಿಲ್ಲೆಗೆ ಭೇಟಿ ನೀಡಿ ಚಳ್ಳಕೆರೆ ತಾಲ್ಲೂಕು, ಉಳ್ಳರ್ತಿ ಕಾವಲ್ ಹಾಗೂ ಖುದಾಪುರ ಗ್ರಾಮದಲ್ಲಿ ಜಮೀನುಗಳನ್ನು ಪರಿಶೀಲಿಸಿ, ಉಳ್ಳರ್ತಿ ಕಾವಲ್ ಸ.ನಂ. 1ರ ಜಮೀನು ಸಂಸ್ಥೆಯ ಬಾಹ್ಯಾಕಾಶ ಸಂಶೋಧನಾ ಕೌಶಲ್ಯದ ಉನ್ನತೀಕರಣಕ್ಕೆ ಪೂರಕವಾಗಿರುವುದಾಗಿ ತಾತ್ವಿಕ ಒಪ್ಪಿಗೆ ನೀಡಿದ ಮೇರೆಗೆ ತಹಸೀಲ್ದಾರ್ ಚಳ್ಳಕೆರೆ ರವರಿಂದ ವರದಿ ಪಡೆಯಲಾಗಿದೆ. ಸದರಿ ವರದಿ ಪ್ರಕಾರ ಉಳ್ಳರ್ತಿ ಕಾವಲ್ ಸ.ನಂ. 1 ರಲ್ಲಿ 2143–36 ಎಕರೆ ಅಮೃತ್ ಮಹಲ್ ಕಾವಲ್ ಜಮೀನಾಗಿದ್ದು ಇದರಲ್ಲಿ ಪಶು ವೈದ್ಯ ಇಲಾಖೆಗೆ ಸೇರಿದ ಕಟ್ಟಡಗಳಿರುತ್ತವೆ. ಈ ಸ.ನಂ.ನಲ್ಲಿ 1410–00 ಎಕರೆ ಜಮೀನನ್ನು ಬಾಬಾ ಅಣು ಸಂಶೋಧನಾ ಕೇಂದ್ರಕ್ಕೆ 250–00 ಎಕರೆ ಜಮೀನನ್ನು ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ನಿಗಮಕ್ಕೆ ಮಂಜೂರಾತಿಗಾಗಿ ಪ್ರಸ್ತಾಪಿಸಲಾಗಿದೆ. ಉಳಿಕೆ 473–20 ಎಕರೆ ಜಮೀನನ್ನು ಮಂಜೂರು ಮಾಡಬಹುದೆಂದು ವರದಿ ಮಾಡಿರುತ್ತಾರೆ.

ಹಾಗೆಯೇ ಚಳ್ಳಕೆರೆ ತಾಲ್ಲೂಕು ನಾಯಕನಹಟ್ಟಿ ಹೋಬಳಿ ಖುದಾಪುರ ಗ್ರಾಮದ ಸ.ನಂ. 47 ರಲ್ಲಿ ಪಹಣಿ ಪ್ರಕಾರ 2819–23 ಎಕರೆ ಇದ್ದು, ಇದರಲ್ಲಿ 1500–00 ಎಕರೆ ಜಮೀನು ಭಾರತೀಯ ವಿಜ್ಞಾನ ಸಂಸ್ಥೆಗೆ, 290–00 ಎಕರೆ ಡಿಆರ್‌ಡಿಓಗೆ ಮಂಜೂರಾಗಿರುತ್ತದೆ. 100–00 ಎಕರೆ ಜಮೀನನ್ನು ಭಾರತೀಯ ಬಾಹ್ಯಾಕಾಶ ಸಂಶೋಧನಾ ಕೇಂದ್ರಕ್ಕೆ ವಸತಿ ಗೃಹಗಳ ನಿರ್ಮಾಣಕ್ಕಾಗಿ ಹಾಗೂ 400–00 ಎಕರೆ ಜಮೀನನ್ನು ಬಾಬಾ ಅಣು ಸಂಶೋಧನಾ ಕೇಂದ್ರಕ್ಕಾಗಿ ಹಾಗೂ 50–00 ಎಕರೆ ಜಮೀನನ್ನು ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಮಂಜೂರು ಮಾಡುವ ಪ್ರಸ್ತಾವನೆ ಪರಿಶೀಲನೆಯಲ್ಲಿದೆ ಎಂಬುದಾಗಿ ವರದಿ ಮಾಡುತ್ತಾ, ಈ ಸ.ನಂ.ನಲ್ಲಿ ಬಾಕಿ ಉಳಿಯುವ 579–23 ಎಕರೆ ಜಮೀನಿನ ಪೈಕಿ 100–00 ಎಕರೆ ಜಮೀನನ್ನು ಭಾರತೀಯ ಬಾಹ್ಯಾಕಾಶ ಸಂಶೋಧನಾ ಕೇಂದ್ರಕ್ಕೆ ಮಂಜೂರು ಮಾಡಬಹುದೆಂದು ವರದಿಸಿರುತ್ತಾರೆ. ಮುಂದುವರಿದು ಈ ಎರಡೂ ಗ್ರಾಮಗಳಲ್ಲಿ ಖುಷ್ಕಿ ಜಮೀನಿನ ಮಾರ್ಗಸೂಚಿ ಬೆಲೆ ಎಕರೆ ಒಂದಕ್ಕೆ ರೂ. 35,000/– ಇರುವುದಾಗಿ ತಿಳಿಸಿರುತ್ತಾರೆ.

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ:32:ಎಲ್‌ಜಿಸಿ: 2010, ಬೆಂಗಳೂರು, ದಿನಾಂಕ: 10–12–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ತಳಕು ಹೋಬಳಿ ಉಳ್ಳರ್ತಿ ಕಾವಲ್ ಸ.ನಂ. 1ರಲ್ಲಿ 473–20 ಎಕರೆ ಹಾಗೂ ನಾಯಕನಹಟ್ಟಿ ಹೋಬಳಿ ಖುದಾಪುರ ಗ್ರಾಮದ ಸ.ನಂ. 47ರಲ್ಲಿ 100–00 ಎಕರೆ ಒಟ್ಟು 573–20 ಎಕರೆ ಅಮೃತ್ ಮಹಲ್ ಕಾವಲ್ ಜಮೀನನ್ನು ಕರ್ನಾಟಕ ಭೂಕಂದಾಯ ನಿಯಮಗಳು 1966ರ ನಿಯಮ 97(4)ರಡಿಯಲ್ಲಿನ ಅವಕಾಶದಂತೆ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಸದರಿ ಜಮೀನಿನ ಪ್ರಚಲಿತ ಮಾರ್ಗಸೂಚಿ ದರ ಎಕರೆ ಒಂದಕ್ಕೆ ರೂ. 35,000/– ಮತ್ತು ಸದರಿ ಜಮೀನಿನ ಸರ್ವೆ ಕಾರ್ಯ, ಸಾದಿಲ್‌ವಾರು ವೆಚ್ಚ ಮತ್ತು ಆಡಳಿತಾತ್ಮಕ ವೆಚ್ಚಕ್ಕಾಗಿ 1.5% ದರ ವಿಧಿಸಿ, ಭಾರತೀಯ ಬಾಹ್ಯಾಕಾಶ ಸಂಶೋಧನಾ ಸಂಸ್ಥೆ (ಇಸ್ರೋ) ಇವರಿಗೆ ಮಂಜೂರು ಮಾಡಿ ಆದೇಶಿಸಿದೆ.

ಈ ಆದೇಶವನ್ನು ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಯವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಪಸಂಮಿ:09:ಅಮಾಭೂ:2010, ದಿನಾಂಕ 4–11–2010ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಜೆ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ–ಮಂಜೂರಾತಿ–3)

ಪಿ.ಆರ್. ನಂ. 2976

**ಕಂದಾಯ ಸಚಿವಾಲಯ**

**ವಿಷಯ** : ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ಉಳ್ಳರ್ತಿ ಕಾವಲ್ ಹಾಗೂ ಖುದಾಪುರ ಕುರಿ ಸಂವರ್ಧನಾ ಕೇಂದ್ರಗಳನ್ನು ಸ್ಥಳಾಂತರಿಸುವ ಸಂಬಂಧ ಸಿ & ಡಿ ಜಮೀನನ್ನು ಪಶುಸಂಗೋಪನಾ ಮತ್ತು ಪಶುವೈದ್ಯ ಸೇವೆಗಳ ಇಲಾಖೆಗೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ** : ಜಿಲ್ಲಾಧಿಕಾರಿಗಳು ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗರವರ ಪತ್ರ ಸಂಖ್ಯೆ: ಎಲ್ಎನ್‌ಡಿ:ಸಿಆರ್/ 135/10–11, ದಿನಾಂಕ 16–8–2010.

**ಪ್ರಸ್ತಾವನೆ :**

ಜಿಲ್ಲಾಧಿಕಾರಿಗಳು ಚಿತ್ರದುರ್ಗ ಜಿಲ್ಲೆರವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುತ್ತಾ ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕು ವರಾಹುಕಾವಲ್, ಉಳ್ಳರ್ತಿ ಕಾವಲ್ ಹಾಗೂ ಖುದಾಪುರ ಗ್ರಾಮಗಳಲ್ಲಿ ಅಮೃತ್ ಮಹಲ್ ಕಾವಲ್ ಜಮೀನನ್ನು ಈಗಾಗಲೇ ಮಂಜೂರು ಮಾಡಲಾಗಿದೆ ಹಾಗೂ ಸರ್ಕಾರದ ಕೆಲವು ಯೋಜನೆಗಳಿಗೆ ಸದರಿ ಗ್ರಾಮಗಳ ಅಮೃತ್ ಮಹಲ್ ಕಾವಲ್ ಜಮೀನನ್ನು ಮಂಜೂರು ಮಾಡುವ ಪ್ರಸ್ತಾವನೆ ಇರುವುದರಿಂದ ಸದರಿ ಎರಡು ಗ್ರಾಮಗಳ ಅಮೃತ್ ಮಹಲ್ ಕಾವಲ್ ಜಮೀನಿಗೆ ಪರ್ಯಾಯವಾಗಿ ಕಂದಾಯ ಇಲಾಖೆಗೆ ಸೇರಿದ ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕು, ನಾಯಕನಹಟ್ಟಿ ಹೋಬಳಿ, ನೆಲಗೇತನಹಟ್ಟಿ ಹಾಗೂ ರಾಮದುರ್ಗ ಗ್ರಾಮದ ಈ ಕೆಳಕಂಡ ಸಿ. & ಡಿ ವರ್ಗದ ಜಮೀನನ್ನು ಲ್ಯಾಂಡ್ ಬ್ಯಾಂಕ್‌ನಿಂದ ವಾಪಸ್ಸು ಪಡೆದು ಪಶುಸಂಗೋಪನೆ ಮತ್ತು ಪಶು ವೈದ್ಯ ಸೇವೆಗಳ ಇಲಾಖೆಗೆ ವರ್ಗಾವಣೆ ಮಾಡಲು ಪ್ರಸ್ತಾವನೆ ಸಲ್ಲಿಸಿದ್ದಾರೆ.

| ಕ್ರಸಂ. | ಗ್ರಾಮದ ಹೆಸರು | ಸ.ನಂ. | ವಿಸ್ತೀರ್ಣ ಎ–ಗುಂ | ಅನಧಿಕೃತ ಸಾಗುವಳಿ ಎ–ಗುಂ | ಮಂಜೂರಾತಿಗೆ ಲಭ್ಯ ಜಮೀನು ಎ–ಗುಂ |
|---|---|---|---|---|---|
| 1 | ನೆಲಗೇತನಹಟ್ಟಿ | 6 | 138–21 | – | 138–21 |
| 2 | ನೆಲಗೇತನಹಟ್ಟಿ | 7 | 77–26 | – | 77–26 |
| 3 | ನೆಲಗೇತನಹಟ್ಟಿ | 8 | 88–26 | 41–14 | 47–12 |
| 4 | ನೆಲಗೇತನಹಟ್ಟಿ | 9 | 79–39 | – | 79–39 |
| | | **ಒಟ್ಟು** | **384–32** | **41–14** | **343–18** |
| 1 | ರಾಮದುರ್ಗ | 13:ಪಿ | 379–35 | – | 379–35 |
| 2 | ರಾಮದುರ್ಗ | 14 | 306–32 | – | 276–32 |
| | | **ಒಟ್ಟು** | **(–) 30–00** | | **656–27** |

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ/70:ಎಲ್‌ಜಿಸಿ: 2010, ಬೆಂಗಳೂರು, ದಿನಾಂಕ: 10–12–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಚಿತ್ರದುರ್ಗ ಜಿಲ್ಲೆ, ವರಹು ಕಾವಲ್ ಖುದಾಪುರ, ಉಳ್ಳರ್ತಿ ಕಾವಲ್‌ನ ಅಮೃತ್ ಮಹಲ್ ಜಮೀನನ್ನು ಸರ್ಕಾರದ ವಿವಿಧ ಯೋಜನೆಗಳಿಗೆ ಈಗಾಗಲೇ ಮಂಜೂರು ಮಾಡಲಾಗಿರುವ ಹಾಗೂ ಮಂಜೂರಾತಿಗೆ ಪ್ರಸ್ತಾವನೆಯಲ್ಲಿರುವ ಜಮೀನಿಗೆ ಪರ್ಯಾಯವಾಗಿ ಚಳ್ಳಕೆರೆ ತಾಲ್ಲೂಕು, ನೆಲಗೇತನಹಟ್ಟಿ ಗ್ರಾಮದ ಸ.ನಂ. 6,7,8, 9 ರಲ್ಲಿನ ವಿಸ್ತೀರ್ಣ 343–18 ಎಕರೆ ಮತ್ತು ರಾಮದುರ್ಗ ಗ್ರಾಮದ ಸ.ನಂ. 13 ಪಿ, 14 ರಲ್ಲಿನ ವಿಸ್ತೀರ್ಣ 656–27 ಒಟ್ಟು ವಿಸ್ತೀರ್ಣ 1000 ಎಕರೆ 0.05 ಗುಂಟೆ (ಒಂದು ಸಾವಿರ ಎಕರೆ ಐದು ಗುಂಟೆ) ಜಮೀನನ್ನು ಲ್ಯಾಂಡ್ ಬ್ಯಾಂಕ್‌ನಿಂದ ವಾಪಸ್ಸು ಪಡೆದು ಸದರಿ ಜಮೀನಿನ ಸರ್ವೆ ಕಾರ್ಯ, ಸಾದಿಲ್ವಾರು ವೆಚ್ಚ ಮತ್ತು ಆಡಳಿತಾತ್ಮಕ ವೆಚ್ಚಕ್ಕಾಗಿ ಎಕರೆ ಒಂದಕ್ಕೆ ಒಂದು ರೂಪಾಯಿ ನಾಮಮಾತ್ರ ಬೆಲೆ ವಿಧಿಸಿ, ಪಶುಸಂಗೋಪನಾ ಮತ್ತು ಪಶು ವೈದ್ಯ ಸೇವೆಗಳ ಇಲಾಖೆಗೆ ವರ್ಗಾಯಿಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಯವರ ಅನಧಿಕೃತ ಟಿಪ್ಪಣಿ ಸಂಖ್ಯೆ:ಪಸಂಮಿ:09:ಅಮಾಭೂ:2010, ದಿನಾಂಕ 4–11–2010ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಜೆ. ಲಕ್ಷ್ಮೀನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 2977 ಕಂದಾಯ ಇಲಾಖೆ (ಭೂ–ಮಂಜೂರಾತಿ–3)

**ಕಂದಾಯ ಸಚಿವಾಲಯ**

**ವಿಷಯ** : ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ನಾಯಕನಹಟ್ಟಿ ಹೋಬಳಿ ಖುದಾಪುರ ಗ್ರಾಮದ ಸ.ನಂ. 47ರಲ್ಲಿ 50–00 ಎಕರೆ ಜಮೀನನ್ನು ಕರ್ನಾಟಕ ಗೃಹ ಮಂಡಳಿಗೆ ವಸತಿ ಯೋಜನೆಗಾಗಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ** : ಜಿಲ್ಲಾಧಿಕಾರಿಗಳು ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ರವರ ಪತ್ರ ಸಂಖ್ಯೆ: ಎಲ್ಎನ್‌ಡಿ:ಸಿಆರ್/ 135/10–11, ದಿನಾಂಕ 30–8–2010.

**ಪ್ರಸ್ತಾವನೆ :**

ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ರವರು ಚಳ್ಳಕೆರೆ ತಾಲ್ಲೂಕು ನಾಯಕನಹಟ್ಟಿ ಹೋಬಳಿ, ಖುದಾಪುರ ಗ್ರಾಮದ ಸ.ನಂ. 47 ರಲ್ಲಿ 400–00 ಎಕರೆ ಜಮೀನನ್ನು ವಸತಿ ಯೋಜನೆಗಾಗಿ ಮಂಜೂರು ಮಾಡುವಂತೆ ಕೋರಿದ್ದ ಮೇರೆಗೆ ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆರವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುತ್ತಾ ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ನಾಯಕನಹಟ್ಟಿ ಹೋಬಳಿ, ಖುದಾಪುರ ಗ್ರಾಮದ ಸ.ನಂ. 47ರಲ್ಲಿ 2819.23 ಎಕರೆ ಜಮೀನು ಇದ್ದು ಇದರಲ್ಲಿ ಈಗಾಗಲೇ ಡಿಆರ್‌ಡಿಓ, ಕೆ.ಎಸ್.ಎಸ್.ಐ.ಡಿಸಿ, ಇಸ್ರೋ, ಬಾಬಾ ಅಣು ಸಂಶೋಧನಾ ಕೇಂದ್ರ

ಹಾಗೂ ಭಾರತೀಯ ವಿಜ್ಞಾನ ಸಂಸ್ಥೆಗೆ ಜಮೀನು ಮಂಜೂರಾಗಿದ್ದು/ಪ್ರಸ್ತಾವನೆ ಇದ್ದು ಖುದಾಪುರ ಗ್ರಾಮದ ಸ.ನಂ. 47ರಲ್ಲಿ 479.23 ಎಕರೆ ಉಳಿಕೆ ಜಮೀನಿದ್ದು, ಈ ಪೈಕಿ 50–00 ಎಕರೆ ಜಮೀನನ್ನು ಕರ್ನಾಟಕ ಗೃಹ ಮಂಡಳಿಗೆ ವಸತಿ ಯೋಜನೆಗಾಗಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 20(1)(a)ರ ಪ್ರಕಾರ ಮಾರುಕಟ್ಟೆ ದರ ಆಧರಿಸಿ, ಮಂಜೂರು ಮಾಡುವ ಸಂಬಂಧ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ. ಹಾಗೆಯೇ ಖುದಾಪುರ ಗ್ರಾಮದ ಜಮೀನಿನ ಮಾರ್ಗಸೂಚಿ ದರ ಎಕರೆ ಒಂದಕ್ಕೆ ರೂ. 35,000/– ಇರುತ್ತದೆ ಎಂಬುದಾಗಿ ವರದಿಸಿರುತ್ತಾರೆ.

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ/81:ಎಲ್‌ಜಿಪಿ: 2010, ಬೆಂಗಳೂರು, ದಿನಾಂಕ: 10–12–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ನಾಯಕನಹಟ್ಟಿ ಹೋಬಳಿ, ಖುದಾಪುರ ಗ್ರಾಮದ ಸ.ನಂ. 47ರಲ್ಲಿನ 479–23 ಎಕರೆ ಜಮೀನಿನ ಪೈಕಿ 50–00 ಎಕರೆ ಅಮೃತ್ ಮಹಲ್ ಕಾವಲ್ ಜಮೀನನ್ನು ಕರ್ನಾಟಕ ಭೂಕಂದಾಯ ನಿಯಮಗಳು 1966ರ ನಿಯಮ 97(4)ರಡಿಯಲ್ಲಿನ ಅವಕಾಶದಂತೆ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಸದರಿ ಜಮೀನಿನ ಪ್ರಚಲಿತ ಮಾರ್ಗಸೂಚಿ ದರ ಎಕರೆ ಒಂದಕ್ಕೆ ರೂ. 35,000/– ಮತ್ತು ಸದರಿ ಜಮೀನಿನ ಸರ್ವೆ ಕಾರ್ಯ, ಸಾದಿಲ್‌ವಾರು ವೆಚ್ಚ ಮತ್ತು ಆಡಳಿತಾತ್ಮಕ ವೆಚ್ಚಕ್ಕಾಗಿ 1.5% ದರ ವಿಧಿಸಿ, ಕರ್ನಾಟಕ ಭೂಮಂಜೂರಾತಿ ನಿಯಮಗಳು 1969ರ ನಿಯಮ 20(1)(a) ರನ್ವಯ ವಸತಿ ಯೋಜನೆಗಾಗಿ ಕರ್ನಾಟಕ ಗೃಹ ಮಂಡಳಿಗೆ ಮಂಜೂರು ಮಾಡಲು ಆದೇಶಿಸಿದೆ.

ಈ ಆದೇಶವನ್ನು ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಯವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಪಸಂಮಿ:09:ಅಮಾಭೂ:2010, ದಿನಾಂಕ 4–11–2010ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್. ಜೆ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ–ಮಂಜೂರಾತಿ–3)

ಪಿ.ಆರ್. ನಂ. 2978

## ಕಂದಾಯ ಸಚಿವಾಲಯ

**ವಿಷಯ** : ವಿನಿವಿಂಕ್ ಹಣಕಾಸು ಸಂಸ್ಥೆಯ ಆಸ್ತಿ ಸ್ವತ್ತುಗಳನ್ನು ಹರಾಜು ಮಾಡಿ ಬಂದಂತಹ ಹಣವನ್ನು ಅದರ ಹೂಡಿಕೆದಾರರಿಗೆ ಹಂಚುವ ಕಾರ್ಯಕ್ಕೆ ಸೃಜಿಸಲಾಗಿರುವ ಉಪವಿಭಾಗಾಧಿಕಾರಿ, ದೊಡ್ಡಬಳ್ಳಾಪುರ ಉಪವಿಭಾಗ ಹಾಗೂ ಸಕ್ಷಮ ಪ್ರಾಧಿಕಾರ ಇವರ ಕಛೇರಿಗೆ ಸಿಬ್ಬಂದಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ** :
1) ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ 18–11–2010 ರಂದು ನಡೆದ ಸಭೆಯ ನಡವಳಿ.
2) ಸರ್ಕಾರದ ಕಾರ್ಯದರ್ಶಿಗಳು (ಆಯವ್ಯಯ ಮತ್ತು ಸಂಪನ್ಮೂಲ) ಆರ್ಥಿಕ ಇಲಾಖೆ, ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: FD/Secy/(B&R)/36/2010, ದಿನಾಂಕ 23–11–2010.
3) ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರ ಪತ್ರ ಸಂಖ್ಯೆ: ಅ.ಸ.ಪ. ಸಂ.ಸಿಬ್ಬಂದಿ (1) ಸಿಆರ್. 55/10–11, ದಿನಾಂಕ 29–11–2010.

**ಪ್ರಸ್ತಾವನೆ :**

ವಿನಿವಿಂಕ್ ಹಣಕಾಸು ಸಂಸ್ಥೆಯ ಸ್ವತ್ತುಗಳನ್ನು ಹರಾಜು ಮಾಡಿ ಬಂದ ಹಣದಿಂದ ವಂಚಿತರಾದ ಹೂಡಿಕೆದಾರರಿಗೆ ಹಂಚುವ ಕುರಿತು ಮಾನ್ಯ ಸರ್ವೋಚ್ಚ ನ್ಯಾಯಾಲಯವು ನಿರ್ದೇಶಿಸಿರುವಂತೆ ಕ್ರಮ ತೆಗೆದುಕೊಳ್ಳಲು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 18–11–2010 ರಂದು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ತೀರ್ಮಾನದಂತೆ ಉಪವಿಭಾಗಾಧಿಕಾರಿ, ದೊಡ್ಡಬಳ್ಳಾಪುರ ಉಪವಿಭಾಗ, ಬೆಂಗಳೂರು ಇವರನ್ನು ಸಕ್ಷಮ ಪ್ರಾಧಿಕಾರಿಯಾಗಿ ನೇಮಕ ಮಾಡಿರುತ್ತಾರೆ ಹಾಗೂ ಅವರಿಗೆ ಸಹಕರಿಸಲು ಒಂದು ತಹಶೀಲ್ದಾರ್, ಶಿರಸ್ತೇದಾರ್, ಪ್ರಥಮ ದರ್ಜೆ ಸಹಾಯಕರು, ದ್ವಿತೀಯ ದರ್ಜೆ ಸಹಾಯಕರು ಹಾಗೂ ಗ್ರೂಪ್–ಡಿ ನೌಕರರ ಹುದ್ದೆ ಸೃಜಿಸಲು ತೀರ್ಮಾನಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ 23–11–2010ರ ಪತ್ರದಲ್ಲಿ ಸರ್ಕಾರದ ಕಾರ್ಯದರ್ಶಿಗಳು (ಆಯವ್ಯಯ ಮತ್ತು ಸಂಪನ್ಮೂಲ) ಆರ್ಥಿಕ ಇಲಾಖೆ, ಇವರು ವಿನಿವಿಂಕ್ ಹಣಕಾಸು ಸಂಸ್ಥೆಯ ಸ್ವತ್ತುಗಳನ್ನು ಹರಾಜು ಮಾಡಿ, ಬಂದ ಹಣದಿಂದ ವಂಚಿತರಾದ ಹೂಡಿಕೆದಾರರಿಗೆ ಮಾನ್ಯ ಸರ್ವೋಚ್ಚ ನ್ಯಾಯಾಲಯವು ನಿರ್ದೇಶಿಸಿರುವಂತೆ ಹಾಗೂ ದಿನಾಂಕ 18–11–2010 ರಂದು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ತೀರ್ಮಾನದಂತೆ ಉಪವಿಭಾಗಾಧಿಕಾರಿ, ದೊಡ್ಡಬಳ್ಳಾಪುರ ಉಪವಿಭಾಗ, ಬೆಂಗಳೂರು, ಇವರನ್ನು ಸಕ್ಷಮ ಪ್ರಾಧಿಕಾರವಾಗಿ ನೇಮಕ ಮಾಡಿರುತ್ತಾರೆ. ಸದರಿ ಸಕ್ಷಮ ಪ್ರಾಧಿಕಾರವು 6 ತಿಂಗಳ ಅವಧಿಯಲ್ಲಿ ಕಾರ್ಯವನ್ನು ಪೂರ್ಣಗೊಳಿಸುವಂತೆ ತಿಳಿಸಲಾಗಿದ್ದು, ಸಕ್ಷಮ ಪ್ರಾಧಿಕಾರದ ಕಛೇರಿಯಲ್ಲಿ ದೊಡ್ಡಬಳ್ಳಾಪುರ ಉಪವಿಭಾಗಾಧಿಕಾರಿ, ದೊಡ್ಡಬಳ್ಳಾಪುರ ಉಪವಿಭಾಗ, ಇವರಿಗೆ ಸಹಕರಿಸಲು ಈ ಕೆಳಕಂಡ ಹುದ್ದೆಗಳನ್ನು ಸೃಜಿಸಿ, ನೇಮಿಸುವಂತೆ ಕೋರಿರುತ್ತಾರೆ.

| | | | |
|---|---|---|---|
| 1 | ತಹಶೀಲ್ದಾರ್ | 01 ಹುದ್ದೆ | ವೇತನ ಶ್ರೇಣಿ ರೂ. 11400–21600 |
| 2 | ಶಿರಸ್ತೇದಾರ್ | 01 ಹುದ್ದೆ | ವೇತನ ಶ್ರೇಣಿ ರೂ. 10000–18150 |
| 3 | ಪ್ರಥಮ ದರ್ಜೆ ಸಹಾಯಕ | 01 ಹುದ್ದೆ | ವೇತನ ಶ್ರೇಣಿ ರೂ. 7275–13350 |
| 4 | ಎರಡನೇ ದರ್ಜೆ ಸಹಾಯಕ | 01 ಹುದ್ದೆ | ವೇತನ ಶ್ರೇಣಿ ರೂ. 5800–10500 |
| 5 | ಗ್ರೂಪ್ 'ಡಿ' | 01 ಹುದ್ದೆ | ವೇತನ ಶ್ರೇಣಿ ರೂ. 4800–7275 |
| | **ಒಟ್ಟು** | **05 ಹುದ್ದೆ** | |

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ 29–11–2010 ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರು ವಿನಿವಿಂಕ್ ಹಣಕಾಸು ಸಂಸ್ಥೆಗೆ ಸ್ವತ್ತುಗಳಿಗೆ ಸಂಬಂಧಿಸಿದಂತೆ ಉಪವಿಭಾಗಾಧಿಕಾರಿ, ದೊಡ್ಡಬಳ್ಳಾಪುರ ಉಪವಿಭಾಗ, ಬೆಂಗಳೂರು ಇವರನ್ನು ಸಕ್ಷಮ ಪ್ರಾಧಿಕಾರವಾಗಿ ನೇಮಕ ಮಾಡಿರುತ್ತಾರೆ. ಸದರಿ ಸಕ್ಷಮ ಪ್ರಾಧಿಕಾರವು 6 ತಿಂಗಳ ಅವಧಿಯಲ್ಲಿ ಕಾರ್ಯವನ್ನು ಪೂರ್ಣಗೊಳಿಸುವಂತೆ ತಿಳಿಸಿರುತ್ತಾರೆ. ಸದರಿ ಉದ್ದೇಶಕ್ಕಾಗಿ ಸಕ್ಷಮ ಪ್ರಾಧಿಕಾರದ ಕಛೇರಿಯಲ್ಲಿ, ದೊಡ್ಡಬಳ್ಳಾಪುರ ಉಪವಿಭಾಗಾಧಿಕಾರಿ, ದೊಡ್ಡಬಳ್ಳಾಪುರ, ಇವರಿಗೆ ಸಹಕರಿಸಲು ತಹಶೀಲ್ದಾರ್ ಹುದ್ದೆಯನ್ನು ಸೃಜಿಸಿ, ಸದರಿ ತಹಶೀಲ್ದಾರ್ ಹುದ್ದೆಗೆ ಸೂಕ್ತ ಅಧಿಕಾರಿಯನ್ನು ನೇಮಿಸುವಂತೆ ಕೋರಿರುತ್ತಾರೆ.

ಈ ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 739 ಎಎಸ್‌ಡಿ 2010, ದಿನಾಂಕ: 09–12–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿನಿವಿಂಕ್ ಹಣಕಾಸು ಸಂಸ್ಥೆಯ ಆಸ್ತಿ ಸ್ವತ್ತುಗಳನ್ನು ಹರಾಜು ಮಾಡಿ ಬಂದಂತಹ ಹಣವನ್ನು ಅದರ ಹೂಡಿಕೆದಾರರಿಗೆ ಹಂಚುವ ಕಾರ್ಯಕ್ಕೆ ಉಪವಿಭಾಗಾಧಿಕಾರಿ, ದೊಡ್ಡಬಳ್ಳಾಪುರ ಉಪವಿಭಾಗ ಬೆಂಗಳೂರು ಜಿಲ್ಲೆ (ಗ್ರಾಮಾಂತರ) ಹಾಗೂ ಸಕ್ಷಮ ಪ್ರಾಧಿಕಾರ ಇವರಿಗೆ ಸಹಕರಿಸಲು ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ 6 ತಿಂಗಳ ಅವಧಿಗೆ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಿದೆ.

| | | | |
|---|---|---|---|
| 1 | ತಹಶೀಲ್ದಾರ್ | 01 ಹುದ್ದೆ | ವೇತನ ಶ್ರೇಣಿ ರೂ. 11400–21600 |
| 2 | ಶಿರಸ್ತೇದಾರ್ | 01 ಹುದ್ದೆ | ವೇತನ ಶ್ರೇಣಿ ರೂ. 10000–18150 |
| 3 | ಪ್ರಥಮ ದರ್ಜೆ ಸಹಾಯಕ | 01 ಹುದ್ದೆ | ವೇತನ ಶ್ರೇಣಿ ರೂ. 7275–13350 |
| 4 | ಎರಡನೇ ದರ್ಜೆ ಸಹಾಯಕ | 01 ಹುದ್ದೆ | ವೇತನ ಶ್ರೇಣಿ ರೂ. 5800–10500 |
| 5 | ಗ್ರೂಪ್ 'ಡಿ' | 01 ಹುದ್ದೆ | ವೇತನ ಶ್ರೇಣಿ ರೂ. 4800–7275 |
| | **ಒಟ್ಟು** | **05 ಹುದ್ದೆ** | |

ಈ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜನೆ ಮಾಡಲಾಗಿದೆ. ಸದರಿ ಪ್ರಾಧಿಕಾರದ ಕಾರ್ಯವು ಮುಗಿದ ಕೂಡಲೇ ಈ ಹುದ್ದೆಗಳು ತಂತಾನೆ ರದ್ದಾಗುತ್ತವೆ.

ಇದಕ್ಕೆ ಸಂಬಂಧಿಸಿದ ವೆಚ್ಚವನ್ನು ಭರಿಸಲು ಲೆಕ್ಕಶೀರ್ಷಿಕೆಯನ್ನು ನಂತರದಲ್ಲಿ ತಿಳಿಸಲಾಗುವುದು.

ಸರ್ಕಾರದ ಕಾರ್ಯದರ್ಶಿಗಳು (ಆಯವ್ಯಯ ಮತ್ತು ಸಂಪನ್ಮೂಲ) ಆರ್ಥಿಕ ಇಲಾಖೆ, ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ : FD/Secy/(B&R)36/2010, ದಿನಾಂಕ 23–11–2010ರಲ್ಲಿ ನೀಡಿರುವ ಸಹಮತಿಯಂತೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. ನಂ. 2979

## FOREST, ECOLOGY AND ENVIRONMENT SECRETARIAT

**Sub:** Diversion of 0.30 ha. of forest land for the project of providing Water Supply to Sri Malai Mahadeshwara Temple from River Cauvery.

**Read:**
1. Letter No. A5 (7) GFL. CR. 4(a)/05-06, Dated: 19.11.2008 of Principal Chief Conservator of Forests, Bangalore.
2. State Government letter No. FEE 58 FLL 2008, dated: 28.01.2009.
3. Letter No. F©A/11.2/264/KAR/MISC/6734, dated: 09.03.2010 of Chief Conservator of Forests 9 (c), Government of India, Ministry of Environment and Forests, Regional Office, (South Zone), Bangalore.
4. Letter No: A5(3)GFL.CR.4(a)//05-06, Dated 15-09-2010 of Principal Chief Conservator of Forests, Bangalore.
5. State Government letter No. FEE 58 FLL 2008, dated: 26.10.2010.
6. Letter No. F©A/11.2/264/KAR/MISC/8160, dated 11.11.2010 of the CCF(c), Government of India, Ministry of Environment and Forests, Regional Office, (South Zone) Bangalore.

**PREAMBLE:**

The Principal Chief Conservator of Forests, Bangalore, dated: 19-11-2008 vide letter read at (1) above has submitted the proposal under Section 2 of Forest (Conservation) Act, 1980 for diversion of 0.30 ha. of forest land in Cauvery Wildlife Division, Kollegal in Chamarajanagar District for providing water supply to Sri Malai Mahadeshwara Temple from River Cauvery, Kollegal Taluk in favour of Executive Engineer, Karnataka Urban Water Supply and Drainage Board Division, Mysore subject to certain conditions.

Accordingly, the proposal was recommended to Government of India vide State Government letter dated 28.01.2009 read at (2) above.

The Government of India, Ministry of Environment and Forests, Bangalore vide their letter dated 09.03.2010 read at (3) above has given their approval in Principle (Stage-I) for diversion of 0.30 ha. of forest land subject to fulfilment of certain conditions and the same was communicated to the Principal Chief Conservator of Forests, Bangalore for compliance.

The Principal Chief Conservator of Forests, Bangalore vide letter dated 15-09-2010 furnished his compliance report referred (4) above and same has been sent to Government of India vide State Government letter dated: 26.10.2010 read at (5) above.

Finally, the Government of India Ministry of Environment and Forests, Bangalore vide their letter dated 11/11/2010 read at (6) above has conveyed their final approval (Stage-II) under Section 2 of Forest (Conservation) Act, 1980 for diversion of 0.30 ha. of forest land in Cauvery Wildlife Division, Kollegal in Chamarajanagar District for providing water supply to Sri. Malai Mahadeshwara Temple from River Cauvery, Kollegal Taluk in favour of Executive Engineer, Karnataka Urban Water Supply and Drainage Board Division, Mysore subject to certain conditions.

The proposal has been examined in detail and hence the order.

**Government Order No. FEE 58 FLL 2008, Bangalore, Dated 13-12-2010**

In the circumstances explained in the preamble above, Government are pleased to accord approval under Section 2 of Forest (Conservation) Act, 1980 for diversion of 0.30 ha. of forest land in Cauvery Wildlife Division, Kollegal in Chamarajanagar District for providing water supply to Sri Malai Mahadeshwara Temple from River Cauvery, Kollegal Taluk in favour of Executive Engineer, Karnataka Urban Water Supply and Drainage Board Division, Mysore subject to the following conditions.

1. The legal Status of the forest land shall remain unchanged.
2. The compensatory afforestation shall be raised over 0.60 ha. of degraded forest land at the cost of user agency.
3. The additional amount of the Net Present Value (NPV) of the diverted forest land if any becoming due after revision of the same by the Hon'ble Supreme Court of India in future., shall charged by the State Government from the user agency and the same shall be transferred to Ad-hoc CAMPA in account number CA 1582 of Corporation Bank Block-II, CGO Complex, Phase-I, Lodhi Road, New Delhi-110 003.
4. The user agency shall strictly comply with the conditions imposed by the Chief Wildlife Warden vide letter dated: 27.11.2009.
5. No labour camps shall be established within the forest area.
6. The total forest area utilized for the project shall not exceed 0.30 ha. In case the land is not taken over by the user agency or the same is not used for the stipulated purpose within a period of two years, then the area shall be taken back by the Forest Department under section 82 of the Karnataka Forest Act 1963. The Conservator of Forests, Chamarajanagara is authorized to take necessary action in this regard. No residential buildings shall be permitted in the proposed area.
7. The user agency has to pay the lease rent as fixed by the Government at the time of sanction any subsequent orders in this regard.
8. The lease is for a period of 20 years.
9. The Wildlife (Protection) Act, 1972, Karnataka Forest Act 1963 and Rules 1969 will be applicable for any violation.
10. The user agency has to pay the Net Present Value of the forest land diverted under this proposal as per the orders of the Hon'ble Supreme Court of India dated: 28.03.2008 and 09.05.2008.
11. Trees shall be felled only when it becomes necessary and under strict supervision of the State Forest Department.
12. The user agency shall pay the cost of extraction of trees if available as estimated by the Department.
13. The user agency shall ensure that there should be no damage to the wildlife.
14. The user agency has to complied with all the conditions imposed by the Principal Chief Conservator of Forests. (Wildlife) strictly.
15. The user agency shall pay the Compensatory Afforestation charges as fixed by the State.
16. The user agency shall deposit Rs. 25.00 lakhs (Twenty five lakhs) in the CAMPA Account for the Conservation and Protection of Cauvery Wildlife Sanctuary as per the directions of the Hon'ble Supreme Court dated: 05-04-2007 in IA No. 1637-1638 in W.P. No. 202/95.
17. The user agency shall abide by all the conditions imposed upon by the Government of India, Government of Karnataka and Principal Chief Conservator of Forests.

By Order and in the name of the Governor of Karnataka

**H.M. Mallikarjuna Swamy**

Under Secretary to Government,

Forest, Ecology and Environment Department.

P.R. 2998

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** 2010–11ನೇ ಸಾಲಿಗೆ ಕರ್ನಾಟಕ ರಾಜ್ಯ ಬಾರ್ ಕೌನ್ಸಿಲ್, ಬೆಂಗಳೂರು, ಇವರಿಗೆ ರೂ. 9.80 ಲಕ್ಷ ಅನುದಾನ ಮಂಜೂರಾತಿ : ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಅಧಿಸೂಚನೆ ಸಂಖ್ಯೆ : ಲಾ 210 ಎಲ್‌ಸಿಎಲ್ 2002, ದಿನಾಂಕ 10.07.2003.

2. ಅಸಿಸ್ಟೆಂಟ್ ರಿಜಿಸ್ಟ್ರಾರ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ : ಹೆಚ್‌ಸಿಬಿ/230/ಬಾರ್ ಕೌನ್ಸಿಲ್ 1983, ದಿನಾಂಕ 27–09–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1) ದಿನಾಂಕ 10–07–2003ರ ಅಧಿಸೂಚನೆಯಲ್ಲಿ ಕರ್ನಾಟಕ ರಾಜ್ಯ ವಕೀಲರ ಪರಿಷತ್ತಿಗೆ ರೂ. 9.80 ಲಕ್ಷಗಳನ್ನು ನಿಗದಿಗೊಳಿಸಿ ವಕೀಲರುಗಳ ಸಂಘಗಳಿಗೆ ಸಹಾಯಾನುದಾನ ನಿಯಮಗಳನ್ವಯ ನೀಡುವ, ಸಹಾಯಾನುದಾನ ನಿಯಮಾವಳಿಗಳಿಗೆ ತಿದ್ದುಪಡಿ (Amendment) ತರಲಾಗಿದೆ.

ಮೇಲೆ ಓದಲಾದ ಕ್ರ.ಮಾಂಕ (2)ರ ದಿನಾಂಕ 27–09–2010 ಪತ್ರದಲ್ಲಿ ಅಸಿಸ್ಟೆಂಟ್ ರಿಜಿಸ್ಟ್ರಾರ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರು ಕರ್ನಾಟಕ ರಾಜ್ಯ ಬಾರ್ ಕೌನ್ಸಿಲ್‌ಗೆ ಈ ಕೆಳಕಂಡ ಉದ್ದೇಶಗಳಿಗಾಗಿ ಸಹಾಯಾನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

1. ಕಿರಿಯ ವಕೀಲರುಗಳಿಗೆ ಕಾನೂನು ಕಮ್ಮಟ : ಕಾರ್ಯಾಗಾರ ಹಾಗೂ ವಕೀಲರುಗಳಿಗೆ ತರಬೇತಿ ನೀಡಲು.
2. ಸೆಮಿನಾರ್ ಮತ್ತು ಕಾನೂನು ಶಿಕ್ಷಣ ಕಾರ್ಯಕ್ರಮಗಳಿಗಾಗಿ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಅಧಿಸೂಚನೆ ದಿನಾಂಕ 10–07–2003 ರ ತಿದ್ದುಪಡಿಯಲ್ಲಿ ಸದರಿ ಉದ್ದೇಶಕ್ಕಾಗಿ ನಿಗದಿಗೊಳಿಸಿರುವಂತೆ ರೂ. 9.80 ಲಕ್ಷಗಳನ್ನು ಬಿಡುಗಡೆ ಮಾಡಲು ತೀರ್ಮಾನಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಲಾ 208 ಎಲ್‌ಸಿಎಲ್ 2010, ಬೆಂಗಳೂರು, ದಿನಾಂಕ : 25–11–2010**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕರ್ನಾಟಕ ರಾಜ್ಯ ಬಾರ್ ಕೌನ್ಸಿಲ್‌ಗೆ 2010–11ನೇ ಸಾಲಿಗೆ ರೂ.9.80 ಲಕ್ಷಗಳ (ರೂಪಾಯಿ ಒಂಭತ್ತು ಲಕ್ಷದ ಎಂಭತ್ತು ಸಾವಿರ ಮಾತ್ರ) ಸಹಾಯಾನುದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಸದರಿ ಮೊತ್ತವನ್ನು ಮೇಲಿನ ಉದ್ದೇಶಗಳಿಗಾಗಿ ಮಾತ್ರ ವಿನಿಯೋಗಿಸತಕ್ಕದ್ದು.

2010–11ನೇ ಸಾಲಿನಲ್ಲಿ ಬಿಡುಗಡೆ ಮಾಡಲಾಗುವ ಮೊತ್ತಕ್ಕೆ ಬಳಕೆಯ ಪ್ರಮಾಣ ಪತ್ರವನ್ನು (Utilization Certificate) ಅಡ್ವೋಕೇಟ್ ಜನರಲ್ (ಸಕ್ಷಮ ಪ್ರಾಧಿಕಾರದ) ರವರ ಮೇಲು ರುಜುವಿನೊಂದಿಗೆ ಸಲ್ಲಿಸುವ ಷರತ್ತಿಗೊಳಪಟ್ಟಿದೆ.

ಈ ಸಹಾಯಾನುದಾನವನ್ನು ಲೆಕ್ಕ ಶೀರ್ಷಿಕೆ 2014–00–800–4–00 ನ್ಯಾಯಾಲಯದ ನೌಕರರಿಗಾಗಿ ತರಬೇತಿ ಸಂಸ್ಥೆ ಉಪ ಶೀರ್ಷಿಕೆ 059–ಇತರೆ ಖರ್ಚು ಇದರಡಿಯ ಯೋಜನೇತರ ಬಾಬ್ತಿನಲ್ಲಿ ಒದಗಿಸಲಾದ ಹಣದಿಂದ ಭರಿಸತಕ್ಕದ್ದು.

ಇದನ್ನು ಆಂತರಿಕ ಆರ್ಥಿಕ ಸಲಹೆಗಾರರು, ವಸತಿ, ನಗರಾಭಿವೃದ್ಧಿ, ಕಾನೂನು ಮತ್ತು ಇ–ಆಡಳಿತ ಇಲಾಖೆ ರವರ ಟಿಪ್ಪಣಿ ಸಂಖ್ಯೆ ವನಇ 458 ಆಂಆಬಿ 2010 ದಿನಾಂಕ 4–11–2010 ಸಹಮತಿ ಹಾಗೂ ಇಲಾಖಾ ಕಾರ್ಯದರ್ಶಿಗಳಿಗೆ ದಿನಾಂಕ 20–01–2003ರ ಆದೇಶ ಸಂಖ್ಯೆ : ಆಇ 01 ಟಿಎಫ್‌ಪಿ 2002 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಕುಂತಲ ಹೆಚ್.ಆರ್.**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್. 2904

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಶ್ರೀ ಹೆಚ್.ಎಸ್. ಪ್ರಕಾಶ್, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಮಡಿಕೇರಿ, ಕೊಡಗು ಜಿಲ್ಲೆ, ರವರ ಅಮಾನತ್ತಿನ ಅವಧಿಯನ್ನು ಕರ್ತವ್ಯವೆಂದು ಪರಿಗಣಿಸಿ ಆದೇಶ ನೀಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ವಾಕೈ 51 ಕೈಸೇವಿ 2008, ದಿ: 09–04–2008.
2. ಇಲಾಖಾ ವಿಚಾರಣೆಗೆ ಆದೇಶಿಸಿದ ಸರ್ಕಾರದ ಆದೇಶ ಸಂಖ್ಯೆ : ವಾಕೈ 51 ಕೈಸೇವಿ 2008, ದಿನಾಂಕ 11–09–2009.
3. ವಿಚಾರಣಾಧಿಕಾರಿಯವರ ವರದಿ ದಿ:
4. ಸರ್ಕಾರದ ಆದೇಶ ಸಂಖ್ಯೆ : ವಾಕೈ 51 ಕೈಸೇವಿ 2008, ದಿನಾಂಕ 30–08–2010.
5. ಶ್ರೀ ಹೆಚ್.ಎಸ್. ಪ್ರಕಾಶ್, ಜಂಟಿ ನಿರ್ದೇಶಕರು, ಜಿಕೈಕೇ, ಕೊಡಗು ಜಿಲ್ಲೆ, ಮಡಿಕೇರಿ, ರವರ ಮನವಿ ದಿ: 01–09–2010.
6. ಕೈಗಾರಿಕಾಭಿವೃದ್ಧಿ ಆಯುಕ್ತರ ಪತ್ರ ಸಂಖ್ಯೆ : ಆಡಳಿತ/ಸಿಬ್ಬಂದಿ/ಇ2/92/2010–11, ದಿನಾಂಕ 13–09–2010.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಶ್ರೀ ಹೆಚ್.ಎಸ್. ಪ್ರಕಾಶ್, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಬೀದರ್, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಹಲವು ಆರೋಪಗಳು ಕಂಡು ಬಂದ ಹಿನ್ನೆಲೆಯಲ್ಲಿ, ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಕಾಯ್ದಿರಿಸಿ ಅಮಾನತ್ತುಗೊಳಿಸಲಾಗಿತ್ತು.

ಮೇಲೆ ಓದಲಾದ (2) ರ ಸರ್ಕಾರದ ಆದೇಶದಲ್ಲಿ ಶ್ರೀ ಹೆಚ್.ಎಸ್. ಪ್ರಕಾಶ್, ಜಂಟಿ ನಿರ್ದೇಶಕರು, ಇವರು ಕರ್ತವ್ಯ ಲೋಪ ಎಸಗಿರುವುದರಿಂದ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿ 1957 ನಿಯಮ 11ರಡಿ ಇಲಾಖಾ ವಿಚಾರಣೆ ನಡೆಸಲು ಆದೇಶಿಸಲಾಗಿತ್ತು.

ಮೇಲೆ ಓದಲಾದ (3) ರಲ್ಲಿ ಅಧಿಕಾರಿಯವರ ಮೇಲಿನ ಆರೋಪಗಳು ರುಜುವಾತಾಗಿಲ್ಲವೆಂದು ವಿಚಾರಣಾಧಿಕಾರಿಗಳು ವರದಿ ಸಲ್ಲಿಸಿದ್ದು, ವರದಿಯ ಅಂಶಗಳನ್ನು ಪರಿಶೀಲಿಸಿ, ಅವರ ಶಿಫಾರಸ್ಸನ್ನು ಸರ್ಕಾರವು ಸ್ವೀಕರಿಸಿ ಉಲ್ಲೇಖ (4)ರ ಆದೇಶದಲ್ಲಿ ಆರೋಪಗಳಿಂದ ದೋಷಮುಕ್ತರನ್ನಾಗಿ ಪರಿಗಣಿಸಿ ಆದೇಶ ಹೊರಡಿಸಿದೆ.

ಮೇಲೆ ಓದಲಾದ (5) ರ ಮನವಿಯಲ್ಲಿ ಶ್ರೀ ಹೆಚ್.ಎಸ್. ಪ್ರಕಾಶ್, ಜಂಟಿ ನಿರ್ದೇಶಕರು, ಇವರು ತಮ್ಮ ಮೇಲಿನ ಆರೋಪಗಳು ರುಜುವಾತಾಗಿಲ್ಲದಿರುವ ಕುರಿತಂತೆ ಅವರನ್ನು ದೋಷಮುಕ್ತರನ್ನಾಗಿ ಪರಿಗಣಿಸಿ ದಿ: 30-08-2010 ರಲ್ಲಿ ಆದೇಶ ಹೊರಡಿಸಿರುವುದರಿಂದ ಅಮಾನತ್ತಿನ ಅವಧಿ ದಿ: 09-04-2008 ರಿಂದ 18-03-2009 ನ್ನು "ಕರ್ತವ್ಯದ ಮೇಲೆ" ಪರಿಗಣಿಸಿ ಎಂಬುದಾಗಿ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ. ಅದರಂತೆ ಇಲಾಖಾ ಮುಖ್ಯಸ್ಥರ ಷರಾವನ್ನು ಪಡೆಯಲಾಯಿತು.

ಮೇಲೆ ಓದಲಾದ (6)ರ ಪತ್ರದಲ್ಲಿ ಕೈಗಾರಿಕಾಭಿವೃದ್ಧಿ ಆಯುಕ್ತರು, ಸರ್ಕಾರದ ಆದೇಶ ಸಂಖ್ಯೆ : ವಾಕೈ 51 ಕೈಸೇವಿ 2008, ದಿ: 30-08-2010 ರಲ್ಲಿ ಶ್ರೀ ಹೆಚ್.ಎಸ್. ಪ್ರಕಾಶ್, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಬೀದರ್, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿರುವರು ಎನ್ನಲಾದ ಆರೋಪಗಳು ರುಜುವಾತಾಗಿಲ್ಲವೆಂದು ವಿಚಾರಣಾಧಿಕಾರಿಗಳ ವರದಿಯ ಮೇಲೆ ಇವರನ್ನು ಆರೋಪಗಳಿಂದ ದೋಷಮುಕ್ತರನ್ನಾಗಿ ಪರಿಗಣಿಸಿ ಆದೇಶಿಸಿರುವುದರಿಂದ ಇವರ ಅಮಾನತ್ತಿನ ಅವಧಿ ದಿ: 09-01-2008 ರಿಂದ 18-03-2009 ನ್ನು ಕೆ.ಸಿ.ಎಸ್. ನಿಯಮ 100 ರ ಅನ್ವಯ ಕರ್ತವ್ಯದ ಅವಧಿಯೆಂದು ಪರಿಗಣಿಸಬಹುದೆಂದು ಅಭಿಪ್ರಾಯದೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಈ ಹಿನ್ನೆಲೆಯಲ್ಲಿ ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ವಾಕೈ 231 ಕೈಸೇವಿ 2010, ಬೆಂಗಳೂರು, ದಿನಾಂಕ : 30-11-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಹೆಚ್.ಎಸ್. ಪ್ರಕಾಶ್, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಮಡಿಕೇರಿ, ಇವರು ಈ ಹಿಂದೆ ಜಿಲ್ಲಾ ಕೈಗಾರಿಕಾ ಕೇಂದ್ರ ಬೀದರ್ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿರುವ ಆರೋಪಗಳು ರುಜುವಾತಾಗಿಲ್ಲವೆಂದು ವಿಚಾರಣಾಧಿಕಾರಿಗಳು ವರದಿ ಸಲ್ಲಿಸಿದ್ದು, ವರದಿಯ ಅಂಶಗಳನ್ನು ಪರಿಶೀಲಿಸಿ, ಅವರ ಶಿಫಾರಸ್ಸನ್ನು ಸರ್ಕಾರವು ಸ್ವೀಕರಿಸಿ ಆರೋಪಗಳಿಂದ ದೋಷಮುಕ್ತರನ್ನಾಗಿ ಪರಿಗಣಿಸಿ ಆದೇಶ ಹೊರಡಿಸಿರುವುದರಿಂದ ಸದರಿಯವರನ್ನು ಅಮಾನತ್ತಿನಲ್ಲಿಟ್ಟಿದ್ದ ಅವಧಿ ದಿ: 09-04-2008 ರಿಂದ 18-03-2009 ರವರೆಗಿನ (ಎರಡು ದಿನಗಳು ಸೇರಿ) ಅವಧಿಯನ್ನು ಕೆ.ಸಿ.ಎಸ್. ನಿಯಮ 100ರ ಅನ್ವಯ "ಕರ್ತವ್ಯದ ಅವಧಿ" ಯೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಲ್.ಎಸ್. ವಾಸನ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
(ಸೇವೆಗಳು)

ಪಿ.ಆರ್. 2905

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕಿನ ಐನಾಪುರ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ/2009-10/3170, ದಿನಾಂಕ 26-05-2010.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕಿನ ಐನಾಪುರ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಐನಾಪುರ ಗ್ರಾಮದ ಜಮೀನುಗಳಿಗೆ ನ್ಯಾಯಾಲಯದ ಆದೇಶಾನುಸಾರ ಹೆಚ್ಚಿನ ಪರಿಹಾರ ಪಾವತಿಸಲು ರೂ.91,06,478-00 ಗಳ ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ 26-05-2010 ರ ಪತ್ರದಲ್ಲಿ ಕೋರಿದ್ದಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರ ದಿನಾಂಕ 06-07-2000ರ ಅಧಿಸೂಚನೆಯಂತೆ ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ದಿನಾಂಕ 07-10-2003 ರಂದು ರಚಿಸಿದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1) ರಡಿ ಚಿಂಚೋಳಿ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ) ದಲ್ಲಿ ಸಲ್ಲಿಸಿದ ಕೆಳಕಂಡ ಎಲ್.ಎ.ಸಿ. ಪ್ರಕರಣಗಳಲ್ಲಿ ನ್ಯಾಯಾಲಯವು ಪ್ರಕರಣಾವಾರು ನೀಡಿರುವ ಆದೇಶಗಳಲ್ಲಿ ಹೆಚ್ಚಿನ ಪರಿಹಾರ ನಿಗದಿಪಡಿಸಿದೆ. ಅದರಂತೆ ಪಾವತಿಸಬೇಕಾದ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರ.ಸಂ. | ಎಲ್.ಎ.ಸಿ. ಸಂಖ್ಯೆ | ಐನಾಪುರ ಗ್ರಾಮದ ಸ.ನಂ. | ವಿಸ್ತೀರ್ಣ ಎ-ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 13/07 | 33,34,<br>237 | 0-14<br>5-19 | 2103558 |
| 2 | 14/07 | 82/1 | 2-20 | 584249 |
| 3 | 15/07 | 82/2 | 10-38 | 3954065 |
| 4 | 16/07 | 32/2 | 1-38 | 455779 |
| 5 | 17/07 | 31/2 | 1-00 | 233881 |
| 6 | 18/07 | 31/ಇ | 1-20 | 541911 |
| 7 | 19/07 | 37 | 2-20 | 584249 |
| 8 | 20/07 | 81/3 | 1-31 | 414905 |
| 9 | 21/07 | 35/1/1 | 1-00 | 233881 |
| **ಒಟ್ಟು** | | | | **9106478** |

ಸಿವಿಲ್ ನ್ಯಾಯಾಲಯದ ಆದೇಶಗಳ ವಿರುದ್ಧ ಮೇಲ್ಮನವಿ ಸಲ್ಲಿಸಲು ಅರ್ಹವಲ್ಲವೆಂದು ಕಂದಾಯ ಇಲಾಖೆಯ ಕಾನೂನು ಕೋಶವು ಅಭಿಪ್ರಾಯ ನೀಡಿದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಮತ್ತು ಭೂಸ್ವಾಧೀನ ಕಾಯ್ದೆಯ ವಿಧಿವಿಧಾನಗಳಂತೆ ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 73 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ : 30–11–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಗುಲ್ಬರ್ಗಾ ಜಿಲ್ಲೆ ಚಿಂಚೋಳಿ ತಾಲ್ಲೂಕಿನ ಐನಾಪುರ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಐನಾಪುರ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಸಂಖ್ಯೆ : 13/07 ರಿಂದ 21/07 ರಲ್ಲಿ ನೀಡಿರುವ ಆದೇಶದಂತೆ ಪರಿಹಾರ ರೂ. 91,06,478–00 ಗಳನ್ನು (ತೊಂಭತ್ತೊಂದು ಲಕ್ಷದ ಆರು ಸಾವಿರದ ನಾನೂರ ಎಪ್ಪತ್ತೆಂಟು ರೂ.ಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಸರ್ಕಾರದ ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರ ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–2010 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗೋಪಾಲ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ,
(ಸಣ್ಣ ನೀರಾವರಿ).

ಪಿ.ಆರ್. 2906

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ತಾಲ್ಲೂಕು ಅಂಬಳೆ ದೊಡ್ಡ ಕೆರೆ ಮತ್ತು ಮೂಡಿಗೆರೆ ತಾಲ್ಲೂಕು ಮಾಕೋನಹಳ್ಳಿ ಬೈರವೇಶ್ವರ ಕೆರೆಗಳ ದುರಸ್ತಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಕಾಮಗಾರಿಗಳ (ಪ್ಯಾಕೇಜ್–13) ಟೆಂಡರ್ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸನೀಇ 26 ಕೆಜಿದು 2010 (5) ದಿನಾಂಕ 19.05.2010.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರದ ಸಂಖ್ಯೆ : ಮುಸ (ದ)/ತಾಂ.2/ಸಇಂ.2/ ಚಿಕ್ಕಮಗಳೂರು/ಅಂಬಳೆ ದೊಡ್ಡ ಕೆರೆ/ಇ–ಟೆಂಡರ್/2010/3122, ದಿನಾಂಕ 28–10–2010.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ 30.10.2010 ರ ಪತ್ರ ಸಂಖ್ಯೆ : ಮುಸದ/ಆಪ್ತಶಾಖೆ/ಟೆಂಡರ್/08–09/3172.

**ಪ್ರಸ್ತಾವನೆ :**

ಆರ್.ಆರ್.ಆರ್. ಕಾರ್ಯಕ್ರಮದಡಿ ಭಾರತ ಸರ್ಕಾರದ ಅನುಮೋದನೆ ದೊರಕಿರುವ 375 ಸಣ್ಣ ನೀರಾವರಿ ಇಲಾಖೆಯ ಕಾಮಗಾರಿಗಳ ಪೈಕಿ ಈ ಕೆಳಕಂಡ ಕಾಮಗಾರಿಗಳು ಸೇರಿದ್ದು, ಈ ಕಾಮಗಾರಿಗಳಿಗೆ ನೀಡಲಾಗಿರುವ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ವಿವರಗಳು ಕೆಳಕಂಡಂತಿವೆ.

| ಕ್ರ.ಸಂ. | ಕಾಮಗಾರಿಯ ಹೆಸರು | ಚಿಕ್ಕಮಗಳೂರು ತಾಲ್ಲೂಕು, ಅಂಬಳೆ ದೊಡ್ಡ ಕೆರೆ | ಮೂಡಿಗೆರೆ ತಾಲ್ಲೂಕು ಮಾಕೋನಹಳ್ಳಿ ಬೈರವೇಶ್ವರ ಕೆರೆ |
|---|---|---|---|
| 1 | ಮಂಜೂರಾದ ಅಂದಾಜಿನ ಮೊತ್ತ | ರೂ. 265.00 ಲಕ್ಷ | ರೂ. 20.00 ಲಕ್ಷ |
| 2 | ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ | ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ಹಾಗೂ ಮುಖ್ಯ ಇಂಜಿನಿಯರ್ ಇವರ ಸಿ.ಇ.ಆರ್. ಸಂಖ್ಯೆ : 36/2010–11 ರಲ್ಲಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. | ಅಧೀಕ್ಷಕ ಇಂಜಿನಿಯರ್ ಇವರ ಸಿ.ಆರ್. ಸಂಖ್ಯೆ : 02/2010–11 ರಲ್ಲಿ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. |

ಈ ಕಾಮಗಾರಿಗಳ ಕೈಗೊಳ್ಳಲು ಹಾಸನ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 07-07-2010 |
| ಹಾಸನ ಜಿಲ್ಲಾ ಟೆಂಡರ್ ಬುಲೆಟಿನ್ | 03-07-2010 |
| ಚಿಕ್ಕಮಗಳೂರು ಜಿಲ್ಲಾ ಟೆಂಡರ್ ಬುಲೆಟಿನ್ | 05-07-2010 |
| ದಿ ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್ ವಿಜಯ ಕರ್ನಾಟಕ ಹಾಗೂ ಪ್ರಜಾವಾಣಿ ದಿನ ಪತ್ರಿಕೆ | 08-07-2010 |

ದಿನಾಂಕ 04-08-2010 ರಂದು ಟೆಂಡರ್‌ನ ತಾಂತ್ರಿಕ ಬಿಡ್‌ಅನ್ನು ತೆರೆದು ಪರಿಶೀಲಿಸಲಾಗಿ, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಟೆಂಡರ್‌ನಲ್ಲಿ ಭಾಗವಹಿಸಿದ್ದ 3 ಜನ ಗುತ್ತಿಗೆದಾರರ ಪೈಕಿ ಇಬ್ಬರು ಗುತ್ತಿಗೆದಾರರು ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್ ಅನ್ನು 20-10-2010 ರಂದು ತೆರೆಯಲಾಗಿದೆ. ವಿವರಗಳು ಈ ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪರಿಷ್ಕೃತ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 2,23,99,558/- |
|---|---|---|---|
| ಕ್ರ.ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಬಿ.ಕೆ. ಗಂಗಾಧರ್, 1ನೇ ದರ್ಜೆ ಗುತ್ತಿಗೆದಾರರು | 2,57,19,379/- | 14.82 ಹೆಚ್ಚು |
| 2 | ಎನ್. ದಿನೇಶ್, 1ನೇ ದರ್ಜೆ ಗುತ್ತಿಗೆದಾರರು | 2,57,44,575/- | 14.93 ಹೆಚ್ಚು |

ಮೇಲ್ಕಂಡಂತೆ ಶ್ರೀ ಬಿ.ಕೆ. ಗಂಗಾಧರ್, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಭಾಗವಹಿಸಿರುವ ಗುತ್ತಿಗೆದಾರರ ಪೈಕಿ ಕಡಿಮೆ ದರ ನಮೂದಿಸಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 14.82 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರು ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 29-10-2010 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 2,23,99,558/- ಗಳ ಮೇಲೆ ಶೇ.13.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ.2,54,23,498/-ಗಳಿಗೆ ಕಾಮಗಾರಿಯನ್ನು ಶ್ರೀ ಬಿ.ಕೆ. ಗಂಗಾಧರ್, 1ನೇ ದರ್ಜೆ ಗುತ್ತಿಗೆದಾರರು ಇವರಿಗೆ ವಹಿಸುವಂತೆ ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3 ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 87 ಕೆಜಿದು 2010, ಬೆಂಗಳೂರು, ದಿನಾಂಕ : 30-10-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ತಾಲ್ಲೂಕು, ಅಂಬಳೆ ದೊಡ್ಡ ಕೆರೆ ಮತ್ತು ಮೂಡಿಗೆರೆ ತಾಲ್ಲೂಕು ಮಾಕೋನಹಳ್ಳಿ ಬೈರವೇಶ್ವರ ಕೆರೆಗಳ ದುರಸ್ತಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 2,23,99,558/-ಗಳ ಮೇಲೆ ಶೇ. 13.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 2,54,23,498/-ಗಳಿಗೆ (ರೂ. ಎರಡು ಕೋಟಿ ಐವತ್ತನಾಲ್ಕು ಲಕ್ಷ ಇಪ್ಪತ್ತಮೂರು ಸಾವಿರದ ನಾಲ್ಕು ನೂರ ತೊಂಬತ್ತೆಂಟು) ಕಾಮಗಾರಿಯನ್ನು ಶ್ರೀ ಬಿ.ಕೆ. ಗಂಗಾಧರ್, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ 20-01-2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುದ್ರಮೂರ್ತಿ,**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ,
(ಸಣ್ಣ ನೀರಾವರಿ).

ಪಿ.ಆರ್. 2907

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಕೆ. ಸದಾನಂದಪ್ಪ, ಹಿಂದಿನ ವಿಶೇಷ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು ಮತ್ತು ಶ್ರೀ ಶ್ರೀರಾಮರೆಡ್ಡಿ, ನಿವೃತ್ತ ರಾಜಸ್ವ ನಿರೀಕ್ಷಕರು ಇವರುಗಳ ವಿರುದ್ಧ ಇಲಾಖಾ ವಿಚಾರಣೆ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಕಂಇ 80 ಎಡಿಇ 2006, ದಿನಾಂಕ 29-04-2008.
2. ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ : ಕಂಇ 80 ಎಡಿಇ 2006, ದಿನಾಂಕ 7.7.2008.
3. ವಿಚಾರಣಾಧಿಕಾರಿಗಳಾದ ಶ್ರೀ ಸೋಸಲೆ ಇಂಧುದರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಜೆ.ಪಿ. ನಗರ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ಅಂತಿಮ ವರದಿ ದಿನಾಂಕ : 30-07-2010/2-8-2010.

**ಪ್ರಸ್ತಾವನೆ :**

ಶ್ರೀ ಕೆ. ಸದಾನಂದಪ್ಪ, ಹಿಂದಿನ ವಿಶೇಷ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು ಮತ್ತು ಶ್ರೀ ಶ್ರೀರಾಮರೆಡ್ಡಿ, ರಾಜಸ್ವ ನಿರೀಕ್ಷಕರು, ಸಾರಕ್ಕಿ ವೃತ್ತ, ಬೆಂಗಳೂರು ದಕ್ಷಿಣ ತಾಲ್ಲೂಕು ಇವರು 2003-06 ನೇ ಸಾಲಿನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರ ಹಳ್ಳಿ ಹೋಬಳಿ, ಚುಂಚಘಟ್ಟ ಗ್ರಾಮದ ಸರ್ವೆ ನಂ. 73/1 ರಲ್ಲಿ ಒಟ್ಟು 5-20 ಎಕರೆ ಜಮೀನಿನಲ್ಲಿ ಖಾತೇದಾರರಾದ ಶ್ರೀ ಹೆಚ್.ಎ. ಸುಬ್ಬರಾವ್ ಬಿನ್ ಅನಂತಪ್ಪ ಇವರ ಹೆಸರಿಗೆ ಹೆಚ್ಓಎ (ಎಸರ) 351/1968-69 ರನ್ವಯ 2-12 ಎಕರೆ-ಗುಂಟೆ ಶಾನುಭೋಗಿ ಇನಾಂ ಜಮೀನು ಮಂಜೂರಾಗಿದ್ದು, ಇದರಲ್ಲಿ 1-30 ಎಕರೆ-ಗುಂಟೆ ವಿಸ್ತೀರ್ಣ ಗ್ರಾಮ ಪಂಚಾಯಿತಿಗೆ ಭೂ ಸ್ವಾಧೀನವಾಗಿದ್ದು, ಅದಕ್ಕೆ ಪರಿಹಾರವಾಗಿ ರೂ.1,055-63 ನ್ನು ಶ್ರೀ ಸುಬ್ಬಾರಾವ್ ರವರಿಗೆ ಪಾವತಿಯಾಗಿರುತ್ತದೆ. ಉಳಿದ 1-18 ಎಕರೆ-ಗುಂಟೆ ಜಮೀನು ಕೂಡ ಬೇರೆಯವರಿಗೆ ಕ್ರಯವಾಗಿರುತ್ತದೆ. ಆದ್ದರಿಂದ, 2002-03ನೇ ಗಣಕೀಕೃತ ಆರ್‌ಟಿಸಿಯಲ್ಲಿ ಸರ್ವೆ ನಂ. 73/1ರ ಜಮೀನಿಗೆ ಆರ್‌ಟಿಸಿ ಕಲಂ-9 ರಲ್ಲಿ ಯಾವುದೇ ಹಕ್ಕುದಾರರು ಇರುವುದಿಲ್ಲವೆಂದು ದೃಢೀಕರಿಸಿದೆ.

ಈ ಸಂದರ್ಭದಲ್ಲಿ, ಶ್ರೀ ರಾಘವೇಂದ್ರ ಇವರು ಶ್ರೀ ಸುಬ್ಬಾರಾವ್ ಇವರು ವಾರಸುದಾರರು ಎಂದು ವಾರಸು ಖಾತೆ ಮಾಡಲು ಅರ್ಜಿ ಸಲ್ಲಿಸಿದ ಹಿನ್ನೆಲೆಯಲ್ಲಿ, ತಹಶೀಲ್ದಾರರು ಈ ಜಮೀನಿನ ಹಿತಾಸಕ್ತಿ ಇರುವ ಯಾರಿಗೂ ನೋಟೀಸ್ ನೀಡದೇ ಸ್ಥಳ ಪರಿಶೀಲನೆ ಮಾಡದೇ, ಆರ್‌ಆರ್‌ಟಿ:ಸಿಆರ್:521/2003-04 ದಿನಾಂಕ 10-11-2004 ರ ಅ.ಜ್ಞಾ. ದಲ್ಲಿ ದಿನಾಂಕ 18-1-1999 ರಂದು ಮೃತಪಟ್ಟ ಹೆಚ್.ಎ. ಸುಬ್ಬಾರಾವ್ ಹೆಸರನ್ನು ಗಣಕೀಕೃತ ಆರ್‌ಟಿಸಿ ಕಲಂ 9 ಹಾಗೂ 12(2) ರಲ್ಲಿ ಮುಂದುವರೆಸಲು ಆದೇಶ ಮಾಡುವ ಮೂಲಕ ಶ್ರೀ ಹೆಚ್.ಎ. ಸುಬ್ಬಾರಾವ್ ರವರ ಹೆಸರಿಗೆ ಹಕ್ಕು ದಾಖಲೆ ಸೃಷ್ಟಿಸಲು ಆದೇಶ ನೀಡಿ ತಮ್ಮ ಅಧಿಕಾರ ದುರುಪಯೋಗಪಡಿಸಿಕೊಂಡಿದ್ದ ಆಪಾದನೆಗೆ ಮೇಲೆ ಓದಲಾದ ಕ್ರಮ ಸಂಖ್ಯೆ : (1)ರ ಸರ್ಕಾರದ ದಿನಾಂಕ 29-4-2008ರ ಆದೇಶದಲ್ಲಿ, ಶ್ರೀ ಕೆ. ಸದಾನಂದಪ್ಪ, ಹಿಂದಿನ ವಿಶೇಷ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು ಮತ್ತು ಶ್ರೀ ಶ್ರೀರಾಮರೆಡ್ಡಿ, ನಿವೃತ್ತ ರಾಜಸ್ವ ನಿರೀಕ್ಷಕರು ಇವರ ವಿರುದ್ಧದ ಆಪಾದನೆಗೆ ವಿಚಾರಣೆ ನಡೆಸಲು 1957ರ ಕರ್ನಾಟಕ ನಾಗರೀಕ ಸೇವಾ (ವ, ನಿ & ಮೇ) ನಿಯಮಾವಳಿಗಳ ನಿಯಮ 11 ರಡಿಯಲ್ಲಿ ಶ್ರೀ ಶೋಸಲೆ ಇಂಧುದರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಜೆ.ಪಿ. ನಗರ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಕರ್ನಾಟಕ ನಾಗರೀಕ ಸೇವಾ (ವ, ನಿ & ಮೇ) ನಿಯಮಾವಳಿಗಳ ನಿಯಮ 11 (5) ರಡಿಯಲ್ಲಿ ಬೆಂಗಳೂರು ನಗರ ಜಿಲ್ಲಾಧಿಕಾರಿಯವರ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಸರ್ಕಾರವು ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (2)ರ ದಿನಾಂಕ 7-7-2008ರ ಸರ್ಕಾರದ ತಿದ್ದುಪಡಿ ಆದೇಶದಲ್ಲಿ, ದಿನಾಂಕ 29-04-2008ರ ಸರ್ಕಾರದ ಆದೇಶದಲ್ಲಿನ ಪ್ರಸ್ತಾವನೆಯಲ್ಲಿನ ಮೊದಲನೇ ಪ್ಯಾರಾದಲ್ಲಿನ 6ನೇ ಸಾಲಿನಲ್ಲಿ "ಚುಂಚಘಟ್ಟ ಗ್ರಾಮದ ಸರ್ವೆ ನಂ. 73/1 ರಲ್ಲಿ ಒಟ್ಟು 5-20 ಎಕರೆ ಜಮೀನಿನಲ್ಲಿ ಖಾತೆದಾರರಾದ ಶ್ರೀ ಹೆಚ್.ಎ. ಸುಬ್ಬಾರಾವ್ ಬಿನ್ ಅನಂತಪ್ಪ ಇವರ ಹೆಸರಿಗೆ ಹೆಚ್ಓಎ (ಎಸರ) 351/1968-69, 2-12 ಎಕರೆ-ಗುಂಟೆ ಶಾನುಭೋಗಿ ಇನಾಂ ಜಮೀನು ಮಂಜೂರಾಗಿದ್ದು" ಎಂಬುದರ ಬದಲಿಗೆ "ಚುಂಚಘಟ್ಟ ಸರ್ವೆ ನಂ. 73 ರಲ್ಲಿ ಒಟ್ಟು 5-20 ಎಕರೆ ಜಮೀನಿನಲ್ಲಿ ಹೆಚ್.ಓ.ಎ. (ಎಸರ) 351, 68-69, ರನ್ವಯ ಶ್ರೀ ಹೆಚ್.ಎ. ಸುಬ್ಬಾರಾವ್ ರವರಿಗೆ 3-08 ಶ್ಯಾನುಭೋಗಿ ಇನಾಂ ಜಮೀನು ಮಂಜೂರಾಗಿದ್ದು" ಎಂದು ತಿದ್ದಿ ಓದಿಕೊಳ್ಳುವಂತೆ ತಿದ್ದುಪಡಿ ಆದೇಶವನ್ನು ಹೊರಡಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (3) ರಲ್ಲಿ ವಿಚಾರಣಾಧಿಕಾರಿಗಳಾದ ಶ್ರೀ ಸೋಸಲೆ ಇಂದುಧರ್‌ರವರು ಸರ್ಕಾರಕ್ಕೆ ದಿನಾಂಕ 30-07-2010/2-8-2010 ರಂದು ಸಲ್ಲಿಸಿರುವ ವಿಚಾರಣಾ ವರದಿಯಲ್ಲಿ, ಬೆಂಗಳೂರು ದಕ್ಷಿಣ ತಾಲ್ಲೂಕು ಇಲ್ಲಿ 2003-2006ನೇ ಸಾಲಿನಲ್ಲಿ ತಹಶೀಲ್ದಾರರಾಗಿ ಕಾರ್ಯ ನಿರ್ವಹಿಸುತ್ತಿದ್ದ ಶ್ರೀ ಕೆ. ಸದಾನಂದಪ್ಪ, ಮತ್ತು ಸಾರಕ್ಕಿ ವೃತ್ತ ಇಲ್ಲಿ ರಾಜಸ್ವ ನಿರೀಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಶ್ರೀರಾಮರೆಡ್ಡಿ ಇವರುಗಳು ಬೆಂಗಳೂರು ದಕ್ಷಿಣ ತಾಲ್ಲೂಕು ಉತ್ತರಹಳ್ಳಿ ಹೋಬಳಿ, ಚುಂಚಘಟ್ಟ ಗ್ರಾಮದ ಸರ್ವೆ ನಂ. 73/1 ರಲ್ಲಿ ಒಟ್ಟು 5-20 ಎಕರೆ ಜಮೀನಿನಲ್ಲಿ ಖಾತೆದಾರರಾದ ಶ್ರೀ ಹೆಚ್.ಎ. ಸುಬ್ಬಾರಾವ್ ಬಿನ್ ಅನಂತಪ್ಪ ಇವರ ಹೆಸರಿಗೆ ಹೆಚ್ಓಎ (ಎಸರ) 351/1968-69, ರನ್ವಯ 2-12 ಎಕರೆ-ಗುಂಟೆ ಶಾನುಭೋಗಿ ಇನಾಂ ಜಮೀನು ಮಂಜೂರಾಗಿದ್ದು, ಇದರಲ್ಲಿ 1-30 ಎಕರೆ ವಿಸ್ತೀರ್ಣ ಗ್ರಾಮ ಪಂಚಾಯಿತಿಗೆ ಭೂ ಸ್ವಾಧೀನವಾಗಿದ್ದು, ಅದಕ್ಕೆ ಪರಿಹಾರವಾಗಿ ರೂ. 1,055.63 ನ್ನು ಶ್ರೀ ಸುಬ್ಬಾರಾವ್‌ರವರಿಗೆ ಪಾವತಿಯಾಗಿರುತ್ತದೆ. ಉಳಿದ 1-18 ಎಕರೆ ಜಮೀನು ಕೂಡ ಬೇರೆಯವರಿಗೆ ಕ್ರಯವಾಗಿರುತ್ತದೆ. ಆದ್ದರಿಂದ 2002-03 ನೇ ಗಣಕೀಕೃತ ಆರ್.ಟಿ.ಸಿ.ಯಲ್ಲಿ ಸರ್ವೆ ನಂ. 73/1ರ ಜಮೀನಿಗೆ ಆರ್‌ಟಿಸಿ ಕಲಂ 9 ರಲ್ಲಿ ಯಾವುದೇ ಹಕ್ಕುದಾರರು ಇರುವುದಿಲ್ಲವೆಂದು ದೃಢೀಕರಿಸಿದೆ. ವಾರಸುದಾರರು ವಾರಸು ಖಾತೆ ಮಾಡಲು ಅರ್ಜಿ ಸಲ್ಲಿಸಿದ್ದ ಹಿನ್ನೆಲೆಯಲ್ಲಿ, ತಹಶೀಲ್ದಾರರು ಈ ಜಮೀನಿನ ಹಿತಾಸಕ್ತಿ ಇರುವ ಯಾರಿಗೂ ನೋಟೀಸ್ ನೀಡದೇ ಸ್ಥಳ ಪರಿಶೀಲನೆ ಮಾಡದೇ ದಿನಾಂಕ 10-11-2004 ರ ಅ.ಜ್ಞಾ. ರಲ್ಲಿ ದಿನಾಂಕ 18-1-99 ರಂದು ಮೃತಪಟ್ಟ ಶ್ರೀ ಹೆಚ್.ಎ. ಸುಬ್ಬಾರಾವ್ ಹೆಸರನ್ನು ಗಣಕೀಕೃತ ಆರ್.ಟಿ.ಸಿ. ಕಲಂ 9 ರಲ್ಲಿ ಹಾಗೂ 12(2) ರಲ್ಲಿ ಮುಂದುವರೆಸಲು ಆದೇಶ ಮಾಡುವ ಮೂಲಕ ಶ್ರೀ ಹೆಚ್.ಎ. ಸುಬ್ಬಾರಾವ್ ರವರ ಹೆಸರಿಗೆ ಹಕ್ಕು ದಾಖಲೆ ಸೃಷ್ಟಿಸಲು ಆದೇಶ ನೀಡಿ ತಮ್ಮ ಅಧಿಕಾರ ದುರುಪಯೋಗ ಪಡಿಸಿಕೊಂಡ ಆಪಾದನೆಯನ್ನು ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ, ಆಪಾದಿತರಾದ ಶ್ರೀ ಕೆ. ಸದಾನಂದಪ್ಪ ಮತ್ತು ಶ್ರೀ ಶ್ರೀರಾಮರೆಡ್ಡಿ ರವರ ಮೇಲೆ ಹೊರಿಸಿರುವ ಆಪಾದನೆಗಳು **ರುಜುವಾತಾಗಿರುವುದಿಲ್ಲ** ಎಂದು ಅಭಿಪ್ರಾಯ ನೀಡಿ ವರದಿ ಸಲ್ಲಿಸಿರುತ್ತಾರೆ.

ವಿಚಾರಣಾಧಿಕಾರಿಗಳ ವಿಚಾರಣಾ ವರದಿಯ ಹಿನ್ನೆಲೆಯಲ್ಲಿ, ಶ್ರೀ ಕೆ. ಸದಾನಂದಪ್ಪ, ಹಿಂದಿನ ವಿಶೇಷ ತಹಶೀಲ್ದಾರ್ ಮತ್ತು ಶ್ರೀ ಶ್ರೀರಾಮರೆಡ್ಡಿ, ನಿವೃತ್ತ ರಾ.ನಿ. ಇವರ ವಿರುದ್ಧದ ಆಪಾದನೆಗಳು ಸಾಬೀತಾಗಿರುವುದಿಲ್ಲವಾದ್ದರಿಂದ ಹಾಗೂ ಸರ್ಕಾರದ ಹಂತದಲ್ಲಿ ಪರಿಶೀಲಿಸಿ, ಅವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಆದೇಶ ಹೊರಡಿಸಲು ತೀರ್ಮಾನಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 80 ಎಡಿಇ 2006, ಬೆಂಗಳೂರು, ದಿನಾಂಕ : 20–11–2010**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆರೋಪಿತ ನೌಕರರಾದ ಶ್ರೀ ಕೆ. ಸದಾನಂದಪ್ಪ, ಹಿಂದಿನ ವಿಶೇಷ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು ಮತ್ತು ಶ್ರೀ ಶ್ರೀರಾಮರೆಡ್ಡಿ, ನಿವೃತ್ತ ರಾಜಸ್ವ ನಿರೀಕ್ಷಕರು ಇವರುಗಳ ವಿರುದ್ಧ ಇಲಾಖಾ ವಿಚಾರಣೆ ಪ್ರಕರಣದಲ್ಲಿ ಆಪಾದನೆಗಳು ಸಾಬೀತಾಗಿಲ್ಲದ ಕಾರಣ ಅವರ ವಿರುದ್ಧ ಹೂಡಲಾದ ಇಲಾಖಾ ವಿಚಾರಣೆಯನ್ನು ಕೈಬಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಬಿ. ಸಸಾಲಟ್ಟಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3).

ಪಿ.ಆರ್. 2908

## ಕಂದಾಯ ಸಚಿವಾಲಯ

**ವಿಷಯ :** ಕೊಪ್ಪಳ ತಾಲ್ಲೂಕು ಗಿಣಿಗೇರಾ ಮತ್ತು ಕನಕಾಪುರ ಗ್ರಾಮಗಳ ಒಸಟ್ಟು ವಿಸ್ತೀರ್ಣ 13.09 ಎಕರೆ ಜಮೀನನ್ನು ಮೆ॥ ಅಲ್ಟ್ರಾಟೆಕ್ ಸಿಮೆಂಟ್ ಲಿಮಿಟೆಡ್ ರವರಿಗೆ ಕೈಗಾರಿಕಾ ಉದ್ದೇಶಕ್ಕಾಗಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿಗಳು, ಕೊಪ್ಪಳ ಜಿಲ್ಲೆ, ಕೊಪ್ಪಳ ರವರ ಪತ್ರ ಸಂಖ್ಯೆ : ಕಂದಾಯ/ಭೂಮಿ/189/ 06–07, ದಿ: 5–6–2007, 20–2–2009, 23–5–2009, 25–5–2009 ಮತ್ತು ಅ.ಸ.ಪ. ಸಂಖ್ಯೆ : ಕಂದಾಯ/ಭೂಮಿ/ಸಿಆರ್/189/2006–07, ದಿನಾಂಕ 3–11–2010.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರಗಳಲ್ಲಿ ಜಿಲ್ಲಾಧಿಕಾರಿಗಳು ಕೊಪ್ಪಳ ಜಿಲ್ಲೆ ಕೊಪ್ಪಳ ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಕೊಪ್ಪಳ ತಾಲ್ಲೂಕು, ಗಿಣಿಗೇರಾ ಗ್ರಾಮದ ಸ.ನಂ. 181/ಎ, 181/ಬಿ, 181/ಸಿ ಮತ್ತು 182 ರಲ್ಲಿನ ಜಮೀನು ಹಾಗೂ ಸದರಿ ಗ್ರಾಮದ ಸ.ನಂ. 111, 112/1, 115, 116, 170, 171, 172, 173, 102, 103ರ ಜಮೀನು ಮತ್ತು ಕನಕಾಪುರ ಗ್ರಾಮದ ಸ.ನಂ. 108ರ ಜಮೀನು ಒಟ್ಟು 13.09 ಎಕರೆ ಜಮೀನನ್ನು ಮೆ॥ ಅಲ್ಟ್ರಾಟೆಕ್ ಸಿಮೆಂಟ್ ಲಿಮಿಟೆಡ್ ಇವರಿಗೆ ಕೈಗಾರಿಕಾ ಉದ್ದೇಶಕ್ಕಾಗಿ ಮಂಜೂರು ಮಾಡಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು.

2) ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಗಿಣಿಗೇರಾ ಗ್ರಾಮದ ಸ.ನಂ. 181/ಎ, 181/ಬಿ, 181/ಸಿ ಮತ್ತು 182 ರಲ್ಲಿನ ಜಮೀನು ಆರ್‌ಟಿಸಿಯ ಕಲಂ 9ರಲ್ಲಿ **ಕರ್ನಾಟಕ ಸರ್ಕಾರ ಲೋಕೋಪಯೋಗಿ ಇಲಾಖೆ ವಿಮಾನ ನಿಲ್ದಾಣ** ಎಂಬುದಾಗಿ ವರ್ಗೀಕೃತಗೊಂಡಿದ್ದರಿಂದ ಈ ಜಮೀನನ್ನು ಮೆ॥ ಅಲ್ಟ್ರಾಟೆಕ್ ಸಿಮೆಂಟ್ ಲಿಮಿಟೆಡ್ ರವರಿಗೆ ಮಂಜೂರು ಮಾಡುವ ಸಂಬಂಧ ಲೋಕೋಪಯೋಗಿ ಇಲಾಖೆಯ ಅಭಿಪ್ರಾಯ ಕೋರಲಾಗಿತ್ತು. ಸದರಿ ಇಲಾಖೆಯು ಈ ಕೆಳಕಂಡಂತೆ ಅಭಿಪ್ರಾಯ ನೀಡಿದೆ:–

3) **"**ಕೊಪ್ಪಳ ತಾಲ್ಲೂಕು ಗಿಣಿಗೇರಾ ಗ್ರಾಮದ ಸ.ನಂ. 181/ಎ, 181/ಬಿ, 181/ಸಿ ಮತ್ತು 182 ರಲ್ಲಿನ 2.16 ಎಕರೆ ಜಮೀನು ಏರ್‌ಸ್ಟ್ರಿಫ್‌ದ ಒಂದು ಭಾಗವಾಗಿದ್ದು ರೆಕಾರ್ಡ್ ಆಫ್ ರೈಟ್ಸ್, ಗೇಣಿ ಮತ್ತು ಪಹಣಿ ಪತ್ರಿಕೆಯಲ್ಲಿ ಕಬ್ಜೆ ಕಾಲಂನಲ್ಲಿ **ಕರ್ನಾಟಕ ಸರ್ಕಾರ ಲೋಕೋಪಯೋಗಿ ಇಲಾಖೆಗೆ ವಿಮಾನ ನಿಲ್ದಾಣ** ಎಂದು ನಮೂದಾಗಿದೆ. ಈ ಜಮೀನು ವಿಮಾನ ನಿಲ್ದಾಣಕ್ಕಾಗಿ ಮೀಸಲಾಗಿದ್ದು ಲೋಕೋಪಯೋಗಿ ಇಲಾಖೆಯ ಉಸ್ತುವಾರಿಯಲ್ಲಿದದ್ದು ಸ್ಪಷ್ಟವಾಗಿದೆ. ಸದರಿ ಜಮೀನನ್ನು ಬೇರೆಯವರಿಗೆ ಮಂಜೂರು ಮಾಡುವ ಅಥವಾ ಲೀಸ್ ಮೇಲೆ ಕೊಡುವ ಹಕ್ಕು ಲೋಕೋಪಯೋಗಿ ಇಲಾಖೆಗೆ ಇರುವುದಿಲ್ಲ. ಏರ್‌ಸ್ಟ್ರಿಫ್ ಉದ್ದೇಶ ಬಿಟ್ಟು ಬೇರೆ ಉದ್ದೇಶಕ್ಕೆ ಉಪಯೋಗಿಸುವ ಸಂದರ್ಭ ಬಂದಾಗ ಸರ್ಕಾರಿ ಜಮೀನುಗಳ ಬಗ್ಗೆ ವ್ಯವಹರಿಸಬೇಕಾದ ಇಲಾಖೆಯು ಕಂದಾಯ ಇಲಾಖೆಯಾಗಿರುತ್ತದೆ. ಏರ್‌ಸ್ಟ್ರಿಫ್ ಇರುವುದರಿಂದ ಲೋಕೋಪಯೋಗಿ ಇಲಾಖೆಯೆಂದು ಇರುವುದೇ ಹೊರತಾಗಿ ಈ ಜಮೀನನ್ನು ಏರ್‌ಸ್ಟ್ರಿಫ್ ಹೊರತುಪಡಿಸಿ ಬೇರೆ ಉದ್ದೇಶಕ್ಕೆ ಉಪಯೋಗಿಸಬೇಕಾಗಿದ್ದಲ್ಲಿ ಕಂದಾಯ ಇಲಾಖೆ ಹಾಗೂ ಸಚಿವ ಸಂಪುಟ ನಿರ್ಣಯಿಸಬೇಕಾಗುತ್ತದೆ. ಕಂಡಿಕೆ 3ರಲ್ಲಿಯ ವಿವರಗಳನ್ನು ಮುಖ್ಯ ಅಭಿಯಂತರರು ಸಂಪರ್ಕ ಮತ್ತು ಕಟ್ಟಡಗಳು (ಉತ್ತರ) ಇವರು ಸಲ್ಲಿಸಿರುವ ಶಿಫಾರಸ್ಸು ವರದಿಗಳ ಪ್ರತಿಯನ್ನು ಕಂದಾಯ ಇಲಾಖೆಗೆ ಕಳುಹಿಸಿಕೊಡುವುದು. ಸದರಿ ಇಲಾಖೆಯು ನಿಯಮಾವಳಿಗಳಂತೆ ಈ ಪ್ರಸ್ತಾವನೆಯ ಬಗ್ಗೆ ಪರಿಶೀಲಿಸಿ ನಿರ್ಣಯಿಸಬಹುದಾಗಿದೆ.**"**

4) ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡ ಲೋಕೋಪಯೋಗಿ ಇಲಾಖೆ ರವರು ಸರ್ಕಾರದ ಕಾರ್ಯದರ್ಶಿಗಳು ಲೋಕೋಪಯೋಗಿ ಇಲಾಖೆ ಇವರಿಗೆ ವಿಳಾಸಿಸಿ ಬರೆದಿರುವ ದಿನಾಂಕ 11–3–2009ರ ಪತ್ರದಲ್ಲಿ, ಸದರಿ 2 ಎಕರೆ 16 ಗುಂಟೆ ಜಮೀನನ್ನು ಮೆ॥ ಅಲ್ಟ್ರಾಟೆಕ್ ಸಿಮೆಂಟ್ ಲಿಮಿಟೆಡ್ ರವರಿಗೆ ಮಂಜೂರು ಮಾಡುವ ಸಂಬಂಧ ಈ ಕೆಳಕಂಡ ಷರತ್ತಿಗೊಳಪಡಿಸಿ ಮಂಜೂರು ಮಾಡಬಹುದೆಂದು ಅಭಿಪ್ರಾಯಿಸಿರುತ್ತಾರೆ.

1) ಗಿಣಿಗೇರಾ ಗ್ರಾಮದ ಸ.ನಂ. 181 ಹಾಗೂ 182 ರಲ್ಲಿನ 2 ಎಕರೆ 16 ಗುಂಟೆ ಜಮೀನಿನ ಭೂ ಬೆಲೆಯನ್ನು ಮಾರುಕಟ್ಟೆ ದರಕ್ಕೆ ಅನುಗುಣವಾಗಿ ಲೋಕೋಪಯೋಗಿ ಇಲಾಖೆ ನಿಗದಿಪಡಿಸಿದ ದರದಲ್ಲಿ ಭೂ ಬೆಲೆಯನ್ನು ಇಲಾಖೆಗೆ ಭರಣ ಮಾಡತಕ್ಕದ್ದು.

2) ಜಮೀನಿನಲ್ಲಿ ಕಂಪನಿಯವರು ತಮ್ಮ ಸ್ವಂತ ಖರ್ಚಿನಲ್ಲಿ ಆರ್.ಯು.ಬಿ. ನಿರ್ಮಿಸಿ ಶಾಶ್ವತವಾಗಿ ಕಂಪನಿಯವರ ವತಿಯಿಂದಲೇ ನಿರ್ವಹಿಸುವ ವ್ಯವಸ್ಥೆಯನ್ನು ಮಾಡತಕ್ಕದ್ದು.

3) ಜಮೀನು ಹಸ್ತಾಂತರದ ಪೂರ್ವದಲ್ಲಿ ಆರ್.ಯು.ಬಿ. ನಿರ್ಮಾಣದ ವಿನ್ಯಾಸವನ್ನು ಲೋಕೋಪಯೋಗಿ ಇಲಾಖೆ ಸಕ್ಷಮ ಪ್ರಾಧಿಕಾರದಿಂದ ಅನುಮೋದಿಸಿಕೊಳ್ಳತಕ್ಕದ್ದು ಹಾಗೂ ಆರ್.ಯು.ಬಿ. ನಿರ್ಮಾಣದ ಕಟ್ಟಡದ ಗುಣಮಟ್ಟವನ್ನು ಇಲಾಖೆಯ ವರಿಷ್ಠಾಧಿಕಾರಿಗಳಿಂದ ಒಪ್ಪಿಗೆಯನ್ನು (Quality acceptance) ಪಡೆಯತಕ್ಕದ್ದು.

4) ಆರ್.ಯು.ಬಿ.ದಲ್ಲಿ ವಾಹನ ಸಂಚಾರಕ್ಕೆ ಯಾವುದೇ ಅಡಚಣೆಯಾಗದಂತೆ ಹಾಗೂ ಆರ್.ಯು.ಬಿ.ಯಲ್ಲಿ ಡ್ರೇನೇಜ್ ಸಮಸ್ಯೆ ಇಲ್ಲದಂತೆ ನಿರ್ವಹಿಸುವ ಹಾಗೂ ಮಳೆ ನೀರನ್ನು ಹೊರಕ್ಕೆ ಸಾಗುವ ಸೂಕ್ತ ವ್ಯವಸ್ಥೆಯನ್ನು ಮಾಡತಕ್ಕದ್ದು.

5) ಈ ಜಮೀನನ್ನು ಕಂಪನಿಯವರು ಬೇರೆ ಕಂಪನಿಯವರಿಗೆ ಹಸ್ತಾಂತರಿಸುವುದಕ್ಕೆ ಅವಕಾಶವಿರುವುದಿಲ್ಲ. ಒಂದು ವೇಳೆ ಅಂತಹ ಪರಿಸ್ಥಿತಿ ಉದ್ಭವಿಸಿದಲ್ಲಿ ಹಸ್ತಾಂತರದ ಪೂರ್ವದಲ್ಲಿ ಪಿ.ಡಬ್ಲ್ಯೂ.ಡಿ. ಸರ್ಕಾರದ ಅನುಮತಿಯನ್ನು ಕಡ್ಡಾಯವಾಗಿ ಪಡೆಯತಕ್ಕದ್ದು.

6) ಈ ಜಮೀನಿನಲ್ಲಿ ಸರ್ಕಾರದ ಪಿ.ಡಬ್ಲ್ಯೂ.ಡಿ. ಇಲಾಖೆಯ Ease mail ಹಕ್ಕು ಶಾಶ್ವತವಾಗಿ ಇರುವುದು.

7) ಈ ಜಮೀನಿನ ಸದ್ಯದ ಸ್ಥಿತಿಯನ್ನು ಬದಲಾಯಿಸದೇ ಯಥಾಸ್ಥಿತಿ ಕಾಯ್ದಿರಿಸಿಕೊಳ್ಳತಕ್ಕದ್ದು.

8) ಇದಲ್ಲದೆ ಸರ್ಕಾರ ವಿಧಿಸಿದ ಕರಾರುಗಳನ್ನು ಹಾಗೂ ಭೂ ಕಂದಾಯ ಕಾಯ್ದೆಯಲ್ಲಿ ತಿದ್ದುಪಡಿ ಆದ ನಿಯಮಗಳನ್ನು ಉಲ್ಲಂಘನೆ ಆದಲ್ಲಿ ಜಮೀನು ಹಸ್ತಾಂತರ ಆದೇಶವನ್ನು ರದ್ದುಪಡಿಸಿ ಜಮೀನಿನ ಕಬ್ಜೆಯನ್ನು ಸರಕಾರಕ್ಕೆ ತೆಗೆದುಕೊಳ್ಳಲಾಗುವುದು.

9) ಸದರಿ ಜಮೀನನ್ನು ಯಾವ ಉದ್ದೇಶಕ್ಕಾಗಿ ನೀಡಲಾಗುವುದೋ ಅದನ್ನು ಹೊರತುಪಡಿಸಿ, ಬೇರೆ ಉದ್ದೇಶಕ್ಕೆ ಉಪಯೋಗಿಸುವುದಕ್ಕೆ ಅವಕಾಶವಿರುವುದಿಲ್ಲ.

5) ಮುಂದುವರಿದು, ಗಿಣಿಗೇರಾ ಗ್ರಾಮದ ಸ.ನಂ. 111, 112/1, 115, 116, 170, 171, 172, 173, 102, 103 ಮತ್ತು ಕನಕಾಪುರ ಗ್ರಾಮದ ಸ.ನಂ. 108ರ ಒಟ್ಟು ವಿಸ್ತೀರ್ಣ 10.33 ಎಕರೆ ಸರ್ಕಾರಿ ಜಮೀನಾಗಿದ್ದು ಕಂದಾಯ ಜಮೀನಾಗಿರುತ್ತದೆ. ಈ ಜಮೀನಿನ ಸುತ್ತಮುತ್ತ ಇರುವ ಪಟ್ಟಾ ಜಮೀನನ್ನು ಮೆ॥ ಅಲ್ಟ್ರಾಟೆಕ್ ಸಿಮೆಂಟ್ ಲಿಮಿಟೆಡ್ ರವರು ಕೈಗಾರಿಕಾ ಉದ್ದೇಶಕ್ಕಾಗಿ ಖಾಸಗಿಯವರಿಂದ ಖರೀದಿಸಿರುತ್ತಾರೆ ಹಾಗೂ ನಿಯಮಾನುಸಾರ ಕರ್ನಾಟಕ ಭೂ ಸುಧಾರಣಾ ಕಾಯ್ದೆ ಕಲಂ 109ರಡಿ ಸರ್ಕಾರದ ಅನುಮತಿ ಪಡೆದುಕೊಂಡಿರುತ್ತಾರೆ. ಅಲ್ಟ್ರಾಟೆಕ್ ಸಂಸ್ಥೆಯವರು ಕೈಗಾರಿಕಾ ಉದ್ದೇಶಕ್ಕಾಗಿ ಪಟ್ಟಾದಾರರಿಂದ ಖರೀದಿಸಿರುವ ಜಮೀನಿನ ಮಧ್ಯ ಭಾಗದಲ್ಲಿ ಈ ಸರ್ಕಾರಿ ಜಮೀನು ಬರುವುದರಿಂದ ಸದರಿ ಜಮೀನನ್ನು ಕೈಗಾರಿಕಾ ಉದ್ದೇಶಕ್ಕಾಗಿ ಮಂಜೂರು ಮಾಡಬೇಕೆಂದು ಸಂಸ್ಥೆಯವರ ಕೋರಿಕೆಯಾಗಿರುತ್ತದೆ.

6) ಗಿಣಿಗೇರಾ ಗ್ರಾಮದ ಖುಷ್ಕಿ ಜಮೀನಿನ ಬೆಲೆ ಎಕರೆ ಒಂದಕ್ಕೆ ರೂ.20,00,000/– ಲಕ್ಷಕ್ಕಿಂತಲೂ ಕಡಿಮೆ ಇಲ್ಲ ಎಂಬುದಾಗಿ ವರದಿ ಮಾಡಿದ್ದಾರೆ.

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 8 ಎಲ್‌ಜಿಆರ್ 2009, ಬೆಂಗಳೂರು, ದಿನಾಂಕ : 23–11–2010**

1) ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡ ಲೋಕೋಪಯೋಗಿ ಇಲಾಖೆರವರು ಮೇಲಿನ ಕಂಡಿಕೆ 4 ರಲ್ಲಿ ವಿಧಿಸಿರುವ ಷರತ್ತುಗಳಿಗೆ ಒಳಪಟ್ಟು ಕೊಪ್ಪಳ ತಾಲ್ಲೂಕು, ಗಿಣಿಗೇರಾ ಗ್ರಾಮದ ಸ.ನಂ. 181/ಎ, 181/ಬಿ, 181/ಸಿ ಮತ್ತು 182 ರಲ್ಲಿನ ಲೋಕೋಪಯೋಗಿ ಇಲಾಖೆಗೆ ಸೇರಿದ 2.16 ಎಕರೆ ಜಮೀನನ್ನು,

ಮತ್ತು

2) ಗಿಣಿಗೇರಾ ಗ್ರಾಮದ ಸ.ನಂ. 111, 112/1, 115, 116, 170, 171, 172, 173, 102, 103 ಮತ್ತು ಕನಕಾಪುರ ಗ್ರಾಮದ ಸ.ನಂ. 108ರಲ್ಲಿನ 10.33 ಎಕರೆ ಒಟ್ಟು 13.09 ಎಕರೆ ಸರ್ಕಾರಿ ಜಮೀನನ್ನು, ಎಕರೆ ಒಂದಕ್ಕೆ ರೂ. 20,00,000/– (ಇಪ್ಪತ್ತು ಲಕ್ಷ ರೂಪಾಯಿಗಳು ಮಾತ್ರ) ಮಾರುಕಟ್ಟೆ ದರ ಹಾಗೂ ನಿಯಮಾನುಸಾರ ಇತರೆ ಶುಲ್ಕಗಳನ್ನು ವಿಧಿಸಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 22 ರನ್ವಯ ಕೈಗಾರಿಕಾ ಉದ್ದೇಶಕ್ಕಾಗಿ ಮೆ॥ ಅಲ್ಟ್ರಾಟೆಕ್ ಸಿಮೆಂಟ್ ಲಿಮಿಟೆಡ್ ರವರಿಗೆ ಮಂಜೂರು ಮಾಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 888 ವೆಚ್ಚ–7/2009, ದಿನಾಂಕ 29–12–2009 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಜಿ. ಲಕ್ಷ್ಮೀನಾರಾಯಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–3).

ಪಿ.ಆರ್. 2909

## ಆರ್ಥಿಕ ಸಚಿವಾಲಯ

## ಸುತ್ತೋಲೆ

**ಸಂಖ್ಯೆ: ಆಇ (ವಿಶೇಷ) 12 ಸಿಪಿಪಿ 2010, ಬೆಂಗಳೂರು, ದಿನಾಂಕ 25–11–2010**

**ವಿಷಯ :** ನ್ಯಾಯಾಲಯದ ತೀರ್ಪಿನನ್ವಯ ನಿಗಧಿತ ಅವಧಿಯೊಳಗೆ ಕಾರ್ಯಕಾರಿ ಆದೇಶಗಳನ್ನು ಹೊರಡಿಸುವ ಬಗ್ಗೆ.

ಸುತ್ತೋಲೆ ಸಂಖ್ಯೆ: ಆಇ (ವಿಶೇಷ) 187/95 ದಿನಾಂಕ 22.2.1995ರಲ್ಲಿ ನ್ಯಾಯಾಲಯದ ತೀರ್ಪಿನನ್ವಯ ಕಾರ್ಯಕಾರಿ ಆದೇಶಗಳನ್ನು ನಿಗಧಿತ ಅವಧಿಯೊಳಗೆ ಹೊರಡಿಸಲು ಸೂಕ್ತ ಕ್ರಮ ಕೈಗೊಳ್ಳುವಂತೆ ಎಲ್ಲಾ ಇಲಾಖೆಗಳಿಗೆ ಸೂಚನೆಗಳನ್ನು ನೀಡಲಾಗಿದೆ.

ಆಡಳಿತಾತ್ಮಕ ಇಲಾಖೆಗಳ ಕಾರ್ಯಕಾರಿ ಆದೇಶವಿಲ್ಲದೆ, ವಿವಿಧ ನ್ಯಾಯಾಲಯಗಳ ತೀರ್ಪುಗಳನ್ನು ಅನುಷ್ಠಾನಗೊಳಿಸಲು ಸಾಧ್ಯವಾಗುತ್ತಿಲ್ಲವೆಂದು, ಮಹಾಲೇಖಪಾಲರು, ತಮ್ಮ ದಿನಾಂಕ: 3.6.2010ರ ಪತ್ರದಲ್ಲಿ ತಿಳಿಸಿರುತ್ತಾರೆ.

ಮಾನ್ಯ ಕರ್ನಾಟಕ ಉಚ್ಛ ನ್ಯಾಯಾಲಯದ ತೀರ್ಪುಗಳನ್ನು ಅನುಷ್ಠಾನಗೊಳಿಸಲು ವಿಳಂಬ ಮಾಡುತ್ತಿರುವ ಬಗ್ಗೆ ಮಾನ್ಯ ಕರ್ನಾಟಕ ಉಚ್ಛ ನ್ಯಾಯಾಲಯವು ತನ್ನ ಅಸಮಾಧಾನವನ್ನು ವ್ಯಕ್ತಪಡಿಸಿರುತ್ತದೆಂದು, ಇತ್ತೀಚೆಗೆ ಅಡ್ವೋಕೇಟ್ ಜನರಲ್‌ರವರು ತಿಳಿಸಿರುತ್ತಾರೆ. ಆಡಳಿತ ಇಲಾಖೆಯು ಕಾನೂನು ಇಲಾಖೆಯೊಂದಿಗೆ ಸಮಾಲೋಚಿಸಿ ನಿರ್ದಿಷ್ಟ ತೀರ್ಪಿನ ವಿರುದ್ಧ ಮೇಲ್ಮನವಿಯನ್ನು ಹೂಡುವ ಬಗ್ಗೆ ಒಂದು ನಿರ್ಧಾರ ಕೈಗೊಳ್ಳಬಹುದಾಗಿದ್ದರೂ ಸಹ, ಈ ನಿಟ್ಟಿನಲ್ಲಿ ಕೈಗೊಳ್ಳುವ ಕ್ರಮವು ನಿಂದನಾ ವ್ಯವಹರಣೆಗಳನ್ನು ಹೂಡಲು ಅವಕಾಶ ಕಲ್ಪಿಸದಂತೆ ಇರತಕ್ಕದ್ದು. ಯಾವ ಪ್ರಕರಣಗಳಲ್ಲಿ ಸಕ್ಷಮ ಪ್ರಾಧಿಕಾರವು ಮೇಲ್ಮನವಿ ಸಲ್ಲಿಸಲು ಅರ್ಹ ಪ್ರಕರಣವಲ್ಲವೆಂದು ಕಾನೂನು ಸಲಹೆ ನೀಡಿದೆಯೋ ಅಂತಹ ಪ್ರಕರಣಗಳಲ್ಲಿ ಸಂಬಂಧಪಟ್ಟ ಆಡಳಿತ ಪ್ರಾಧಿಕಾರವು ಯಾವುದೇ ವಿಳಂಬ ಮಾಡದೆ ನ್ಯಾಯಾಲಯದ ಆದೇಶಗಳನ್ನು ಅನುಷ್ಠಾನಗೊಳಿಸಿ ಮಹಾಲೇಖಪಾಲರಿಗೆ ಮತ್ತು ಸಂಬಂಧಪಟ್ಟ ಇಲಾಖೆಗಳಿಗೆ ತಿಳಿಸುವುದು.

ಈ ಹಿನ್ನೆಲೆಯಲ್ಲಿ, ನ್ಯಾಯಾಲಯದ ತೀರ್ಪುಗಳಲ್ಲಿ ನಿಗದಿಪಡಿಸಿದ ಅವಧಿಯೊಳಗೆ ಕಾರ್ಯಕಾರಿ ಆದೇಶಗಳನ್ನು ಹೊರಡಿಸಲು, ಕ್ರಮ ಕೈಗೊಂಡು ಮಹಾಲೇಖಪಾಲರ ಕಛೇರಿಗೆ ತಿಳಿಸುವುದು ಅಥವಾ ನ್ಯಾಯಾಲಯದ ತೀರ್ಪಿನ ವಿರುದ್ಧ ಉನ್ನತ ನ್ಯಾಯಾಲಯಗಳಲ್ಲಿ ಮೇಲ್ಮನವಿ ಸಲ್ಲಿಸುವ ಬಗ್ಗೆ ಒಂದು ಮಧ್ಯಂತರ ಉತ್ತರವನ್ನು ಅವರಿಗೆ ಕಳುಹಿಸಬೇಕೆಂದು ಮತ್ತೊಮ್ಮೆ ಎಲ್ಲಾ ಆಡಳಿತ ಇಲಾಖೆಗಳಿಗೆ /ಇಲಾಖಾ ಮುಖ್ಯಸ್ಥರಿಗೆ ಈ ಮೂಲಕ ತಿಳಿಸಲಾಗಿದೆ.

**ಎಲ್.ವಿ. ನಾಗರಾಜನ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ
ಆರ್ಥಿಕ ಇಲಾಖೆ

ಪಿ.ಆರ್. 2919

## FINANCE SECRETARIAT

## CIRCULAR

**No. FD (Spl) 12 CPP 2010. Bangalore Dated 25.11.2010**

**Sub:** Issue of Executive Orders based on Court judgement within the stipulated time.

In circular No. FD (Spl) 187/95 dated 22.2.1995 instructions have been issued to all the Departments to take necessary action for issuing executive orders on court judgements within the stipulated time.

The Accountant General in his letter dated 3.6.2010 has stated that it cannot implement the judgements of the various Courts without the executive orders of the concerned Administrative Departments, based on the Court Orders.

It has also been recently conveyed by the Advocate General that the Hon'ble High Court of Karnataka has expressed displeasure on delay in implementing court orders. While the Administrative Department in consultation with Law Department may take a stand that an appeal could be filed against a specific order, that action also needs to be taken in prompt way so as not to give scope for initiation of contempt proceedings. In cases where the competent authority has given a legal opinion that there is no merit in filing an appeal, the concerned administrative authority must not lose any time in implementing the court orders, intimating the office of the Accountant General and all concerned.

Under the circumstances, it is impressed upon all the Administrative Departments/Heads of the Departments once again, to take urgent action to issue necessary executive orders and communicate such orders to the Accountant General's office within the stipulated time fixed by the courts for the implementation of judgements, or an interim reply regarding preferring an appeal in the higher courts against the judgements should be sent.

**L.V. Nagarajan**
Principal Secretary to Government
FINANCE DEPARTMENT

P.R. 2919

## ಆರ್ಥಿಕ ಸಚಿವಾಲಯ

**ವಿಷಯ :** ಭವಿಷ್ಯ ನಿಧಿ ಚಂದಾದಾರನ ಗಂಡ/ಹೆಂಡತಿ ಹೆಸರಿನಲ್ಲಿ ಮನೆ/ನಿವೇಶನ ಖರೀದಿಸಲು, ಮನೆ ನಿರ್ಮಾಣ, ಸ್ವಾಧೀನ ಮತ್ತು ಪುನರ್ ನಿರ್ಮಾಣದ ವೆಚ್ಚವನ್ನು ಭರಿಸುವ ಉದ್ದೇಶಕ್ಕಾಗಿ ಸಾಮಾನ್ಯ ಭವಿಷ್ಯ ನಿಧಿಯಿಂದ ಆಂಶಿಕ ಅಂತಿಮ ಹಣವನ್ನು ಹಿಂಪಡೆಯಲು ಮಂಜೂರಾತಿ ನೀಡುವ ಬಗ್ಗೆ.

**ಪ್ರಸ್ತಾವನೆ :**

ಕರ್ನಾಟಕ ಸಾಮಾನ್ಯ ಭವಿಷ್ಯ ನಿಧಿ ನಿಯಮಗಳು 1957ರ ನಿಯಮ 24ರಡಿ ಸಾಮಾನ್ಯ ಭವಿಷ್ಯ ನಿಧಿಗೆ ಚಂದಾದಾರರಾಗಿರುವ ಸರ್ಕಾರಿ ನೌಕರರುಗಳಿಗೆ ಕೆಲವೊಂದು ನಿರ್ದಿಷ್ಟ ಉದ್ದೇಶಗಳಿಗಾಗಿ ಸಾಮಾನ್ಯ ಭವಿಷ್ಯ ನಿಧಿ ಖಾತೆಯಲ್ಲಿ ಜಮೆಯಾಗಿರುವ ಮೊತ್ತದಿಂದ ಆಂಶಿಕ ಅಂತಿಮವಾಗಿ ಹಣವನ್ನು ಹಿಂತೆಗೆದುಕೊಳ್ಳಲು ಅವಕಾಶವನ್ನು ಕಲ್ಪಿಸಲಾಗಿದೆ. ಪ್ರಸ್ತುತ ಜಾರಿಯಲ್ಲಿರುವ ಸಾಮಾನ್ಯ ಭವಿಷ್ಯ ನಿಧಿ ನಿಯಮಗಳಡಿ ಚಂದಾದಾರನ ಮಾಲೀಕತ್ವದಲ್ಲಿರುವ ಮನೆಗೆ ಮಾತ್ರ ಮನೆ ನಿರ್ಮಾಣ, ಸ್ವಾಧೀನ, ಪುನರ್ ನಿರ್ಮಾಣ ಅಥವಾ ಋಣ ವಿಮೋಚನೆಗಾಗಿ ಆಂಶಿಕ ಅಂತಿಮವಾಗಿ ಹಣವನ್ನು ಹಿಂಪಡೆಯಲು ಅವಕಾಶವಿದೆ.

ಕೇಂದ್ರ ಸರ್ಕಾರದ ಭವಿಷ್ಯ ನಿಧಿ ನಿಯಮಗಳ ಪ್ರಕಾರ ಗಂಡ/ಹೆಂಡತಿಯು ಭವಿಷ್ಯ ನಿಧಿಗೆ ನಾಮನಿರ್ದೇಶಿಸಿದ ವ್ಯಕ್ತಿಗಳ ಪೈಕಿ ಮೊದಲನೇ ವ್ಯಕ್ತಿಯಾಗಿದ್ದಲ್ಲಿ ಮಾತ್ರ, ಚಂದಾದಾರನ ಗಂಡ/ ಹೆಂಡತಿಯ ಹೆಸರಿನಲ್ಲಿ ಮನೆ/ನಿವೇಶನ ಖರೀದಿಸಲು, ಪುನರ್ ನಿರ್ಮಿಸಲು ಆಂಶಿಕ ಅಂತಿಮವಾಗಿ ಹಣವನ್ನು ಹಿಂಪಡೆಯಲು ಅವಕಾಶವನ್ನು ಕಲ್ಪಿಸಲಾಗಿದೆ.

ಆದರೆ ಇತ್ತೀಚೆಗೆ ಕರ್ನಾಟಕ ಸಾಮಾನ್ಯ ಭವಿಷ್ಯ ನಿಧಿ ನಿಯಮಗಳು 1957ರಡಿಯಲ್ಲಿಯೂ ಸಹ ಸಾಮಾನ್ಯ ಭವಿಷ್ಯ ನಿಧಿ ಚಂದಾದಾರರ ಗಂಡ/ಹೆಂಡತಿ ಹೆಸರಿನಲ್ಲಿ ಮನೆ/ನಿವೇಶನ ಖರೀದಿಸುವ ವೆಚ್ಚವನ್ನು ಭರಿಸುವ ಉದ್ದೇಶಕ್ಕಾಗಿ ಆಂಶಿಕ ಅಂತಿಮ ಹಣವನ್ನು ಹಿಂಪಡೆಯಲು ಅನೇಕ ಕೋರಿಕೆಗಳು ಬರುತ್ತಿವೆ. ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಗಂಡ/ಹೆಂಡತಿ ಹೆಸರಿನಲ್ಲಿ ಮನೆ ನಿರ್ಮಾಣ, ಸ್ವಾಧೀನ, ಪುನರ್ ನಿರ್ಮಾಣ ಅಥವಾ ಋಣ ವಿಮೋಚನೆಗಾಗಿ ಆಂಶಿಕ ಅಂತಿಮ ಹಣ ಹಿಂಪಡೆಯುವ ಬಗ್ಗೆ ಸಾಮಾನ್ಯ ಭವಿಷ್ಯ ನಿಧಿ ಚಂದಾದಾರರಿಂದ ಬರಬಹುದಾದ ಕೋರಿಕೆಗಳನ್ನು ಕೇಂದ್ರ ಸರ್ಕಾರದ ಭವಿಷ್ಯ ನಿಧಿ ನಿಯಮಗಳ ಪ್ರಕಾರ ಕರ್ನಾಟಕ ಸಾಮಾನ್ಯ ಭವಿಷ್ಯ ನಿಧಿ ನಿಯಮಗಳಿಗೆ ಪೂರಕ ತಿದ್ದುಪಡಿ ಪ್ರಕ್ರಿಯೆ ಪೂರ್ಣಗೊಳ್ಳುವವರೆಗೆ ಪರಿಗಣಿಸುವುದು ಸಮಂಜಸವೆಂದು ಸರ್ಕಾರ ತೀರ್ಮಾನಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 17 ಮುಭನಿ 2009 ಬೆಂಗಳೂರು, ದಿನಾಂಕ 22ನೇ ನವೆಂಬರ್, 2010.**

ಕರ್ನಾಟಕ ಸಾಮಾನ್ಯ ಭವಿಷ್ಯ ನಿಧಿ ನಿಯಮಗಳು 1957ರಡಿ ಖಾತೆಯಲ್ಲಿರುವ ಹಣವನ್ನು ಸ್ವೀಕರಿಸಲು ಚಂದಾದಾರನ ಗಂಡ/ಹೆಂಡತಿ ಮೊದಲ ನಾಮ ನಿರ್ದೇಶಿತ ವ್ಯಕ್ತಿಯಾಗಿದ್ದಲ್ಲಿ ಮಾತ್ರ ಅಂತಹ ವ್ಯಕ್ತಿಯ ಹೆಸರಿನಲ್ಲಿ ಮನೆ/ನಿವೇಶನ ಖರೀದಿಸಲು, ಮನೆ ನಿರ್ಮಿಸಲು, ಪುನರ್ ನಿರ್ಮಿಸಲು ಭವಿಷ್ಯ ನಿಧಿ ಖಾತೆಯಲ್ಲಿ ಜಮೆಯಾಗಿರುವ ಮೊತ್ತದಲ್ಲಿ ನಿಯಮಾನುಸಾರ ಆಂಶಿಕ ಅಂತಿಮವಾಗಿ ಹಣವನ್ನು ಹಿಂಪಡೆಯಲು ಸರ್ಕಾರ ಅನುಮತಿ ನೀಡಿ ಆದೇಶಿಸಿದೆ.

ಈ ಆದೇಶವು ತಕ್ಷಣದಿಂದ ಜಾರಿಗೆ ಬರತಕ್ಕದ್ದು ಮತ್ತು ಕರ್ನಾಟಕ ಸಾಮಾನ್ಯ ಭವಿಷ್ಯ ನಿಧಿ ನಿಯಮಗಳಿಗೆ ಅಗತ್ಯ ತಿದ್ದುಪಡಿ ಆದೇಶವನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಶ್ರೀನಿವಾಸಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು)

ಪಿ.ಆರ್. 2920

## ಇಂಧನ ಸಚಿವಾಲಯ

**ವಿಷಯ** : ಮೆ॥ ಎಸ್.ಎಲ್.ವಿ. ಪವರ್ ಪ್ರೈವೇಟ್ ಲಿಮಿಟೆಡ್ ಇವರ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 231 ಎನ್‌ಸಿಇ 2002 ದಿನಾಂಕ 10.10.2002.
2. ಸರ್ಕಾರಿ ಆದೇಶ ಸಂಖ್ಯೆ: ಇಂಇ 23 ಎನ್‌ಸಿಇ 2004 ದಿನಾಂಕ 10.03.2004.
3. ಸರ್ಕಾರಿ ಆದೇಶ ಸಂಖ್ಯೆ: ಇಂಎನ್ 246 ಎನ್‌ಸಿಇ 2006 ದಿನಾಂಕ 27.06.2006.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಶೋಕಾಸ್ ನೋಟೀಸ್/2010 ದಿನಾಂಕ 17.04.2010.
5. ಕಾರಣ ಕೇಳುವ ನೋಟೀಸು ಸಂಖ್ಯೆ: ಇಎನ್ 174 ಎನ್‌ಸಿಇ 2010 ದಿನಾಂಕ: 26.04.2010.
6. ಮೆ॥ ಎಸ್.ಎಲ್.ವಿ. ಪವರ್ ಪ್ರೈವೇಟ್ ಲಿಮಿಟೆಡ್ ಇವರ ಪತ್ರ ದಿನಾಂಕ: 17.05.2010 ಹಾಗೂ 15.06.2010.
7. ಸರ್ಕಾರದ ಪತ್ರ ಸಂಖ್ಯೆ: ಇಎನ್ 174 ಎನ್‌ಸಿಇ 2010 ದಿನಾಂಕ: 19.06.2010.
8. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಅಣೆಯೂರ್‌ಎಂಹೆಚ್‌ಎಎಸ್/2010/2221 ದಿನಾಂಕ: 23.07.2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಎಸ್.ಎಲ್.ವಿ. ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಗಂಡಿಬಾಗಿಲು ಬಳಿ ಅಣಿಯೂರು ಹೊಳೆಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು. ತದ ನಂತರ ಮೇಲೆ ಓದಲಾದ ಕ್ರಮ ಸಂಖ್ಯೆ (2) ಮತ್ತು (3)ರ ಆದೇಶಗಳಲ್ಲಿ ಸಾಮರ್ಥ್ಯವನ್ನು 10.00 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಅನುಷ್ಠಾನದ ಅವಧಿಯು ಸರ್ಕಾರದ ಆದೇಶದಂತೆ ಪೂರ್ಣಗೊಂಡಿದ್ದು, ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಸಾಧಿಸದೇ ಇರುವುದರಿಂದ ಹಾಗೂ ಕಾಲಾವಕಾಶ ವಿಸ್ತರಣೆಯನ್ನು ಮಾಡಿಕೊಳ್ಳದೇ ಇರುವ ಹಿನ್ನೆಲೆಯಲ್ಲಿ ಮೆ॥ ಎಸ್.ಎಲ್.ವಿ. ಪವರ್ ಪ್ರೈವೇಟ್ ಲಿಮಿಟೆಡ್ ಯೋಜನೆಯನ್ನು ರದ್ದುಪಡಿಸುವ ಸಂಬಂಧ ಇವರಿಗೆ ಕಾರಣ ಕೇಳುವ ನೋಟಿಸನ್ನು ಜಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆ ಆದೇಶವನ್ನು ಏಕೆ ರದ್ದುಪಡಿಸಬಾರದೆಂದು ಮೆ॥ ಎಸ್.ಎಲ್.ವಿ. ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ನೋಟೀಸನ್ನು ಸ್ವೀಕರಿಸಿದ 15 ದಿನಗಳೊಳಗಾಗಿ ಸಮಜಾಯಿಷಿಯನ್ನು ನೀಡುವಂತೆ ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಪತ್ರದಲ್ಲಿ ಅಭಿವೃದ್ಧಿದಾರರು ಕಾರಣ ಕೇಳುವ ನೋಟೀಸಿಗೆ ಸಮಜಾಯಿಷಿಯನ್ನು ನೀಡಿರುತ್ತಾರೆ. ಅಭಿವೃದ್ಧಿದಾರರು ನೀಡಿರುವ ಉತ್ತರದಲ್ಲಿ ಯೋಜನೆಯ ಅನುಷ್ಠಾನದ ಸಂಬಂಧದಲ್ಲಿ ನೀರಾವರಿ ಇಲಾಖೆ, ಕೆ.ಪಿ.ಟಿ.ಸಿ.ಎಲ್.ನಿಂದ ಎವ್ಯಾಕ್ಯುಯೇಷನ್‌ಗೆ ಅನುಮೋದನೆ ಪಡೆದಿದ್ದು, Augmentation Charges ರೂ. 30.00 ಲಕ್ಷಗಳನ್ನು ಪಾವತಿಸಲಾಗಿದೆಯೆಂದು ತಿಳಿಸಿರುತ್ತಾರೆ. ಯೋಜನೆಯ ಸ್ಥಳವು

ಖಾಸಗಿ ಭೂಮಿಯಾಗಿದ್ದು, ಅವರೊಂದಿಗೆ ಮಾತುಕತೆ ಪ್ರಗತಿಯಲ್ಲಿದೆಯೆಂದು ತಿಳಿಸಿರುತ್ತಾರೆ ಹಾಗೂ ಯೋಜನೆಯ ಸ್ಥಳಕ್ಕೆ ಸಂಪರ್ಕ ಮಾರ್ಗವನ್ನು ಕಲ್ಪಿಸಲಾಗಿದೆಯೆಂದು ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ಸರ್ಕಾರದ ಪತ್ರದಲ್ಲಿ ಮೆ॥ ಎಸ್.ಎಲ್.ವಿ. ಪವರ್ ಪ್ರೈವೇಟ್ ಲಿಮಿಟೆಡ್ ಇವರು ದಿನಾಂಕ: 15.06.2010ರಂದು ಸಲ್ಲಿಸಿದ್ದ ಮನವಿ ಹಾಗೂ ಅದರೊಂದಿಗಿನ ಅಡಕಗಳ ಪ್ರತಿಗಳನ್ನು ಕ್ರೆಡಲ್‌ಗೆ ಕಳುಹಿಸಿ, ಈ ಯೋಜನೆಯ ಸ್ಥಳ ಪರಿವೀಕ್ಷಣೆಯನ್ನು ನಡೆಸಿ ವರದಿಯನ್ನು ನೀಡುವಂತೆ ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (8)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಯೋಜನಾ ಸ್ಥಳ ಪರಿವೀಕ್ಷಣೆ ಮಾಡಿ, ಈ ಕೆಳಗಿನಂತೆ ಪ್ರಗತಿಯನ್ನು ಸಾಧಿಸಿದ್ದಾರೆಂದು ವರದಿ ನೀಡಿರುತ್ತಾರೆ.

| | | |
|---|---|---|
| I | Irrigation Department clearance | 24.11.2007 |
| II | Evacuation approval from KPTCL | 7.9.2007 |
| III | 27.16 acres of land sanctioned through KIADB for 2 projects | 24.11.2006 |
| IV | Loan obtained from SBI and SBM | Letter of sanction from SBI |
| V | Certification of project expenses by Chartered Accountant. | 12.06.2010. C.A. certified that the company has incurred an expenditure of Rs. 263.89 lakhs as on 31.03.2010 on this project. |

ಮುಂದುವರೆದು, ಯೋಜನೆಗಾಗಿ ಕೆಳಕಂಡ ನಿಬಂಧನೆಗೊಳಪಟ್ಟು ಕಾಲಾವಕಾಶವನ್ನು ದಿನಾಂಕ: 20.09.2012 ರವರೆಗೆ ವಿಸ್ತರಿಸಲು ವ್ಯವಸ್ಥಾಪಕ ನಿರ್ದೇಶಕರು, ಕ್ರೆಡಲ್‌ರವರು ಶಿಫಾರಸ್ಸು ಮಾಡಿರುತ್ತಾರೆ :–

i) The firm has to give presentation on preparedness towards implementation of the project and a firm commitment towards implementation of the project with time line.

ii) The firm shall pay the applicable time extension fee to KREDL.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 174 ಎನ್‌ಸಿಇ 2010, ಬೆಂಗಳೂರು, ದಿನಾಂಕ: 30–11–2010.**

ಮೆ॥ ಎಸ್.ಎಲ್.ವಿ. ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಗಂಡಿಬಾಗಿಲು ಬಳಿ ಆಣಿಯೂರು ಹೊಳೆಗೆ ಅಡ್ಡಲಾಗಿ ಹಂಚಿಕೆಯಾಗಿದ್ದ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಈ ಕೆಳಗಿನ ನಿಬಂಧನೆಗೊಳಪಟ್ಟು ಕಾಲಾವಕಾಶವನ್ನು ದಿನಾಂಕ: 20.09.2012ರವರೆಗೆ ವಿಸ್ತರಿಸಲಾಗಿದೆ.

1. The firm has to give presentation on preparedness towards implementation of the project and a firm commitment towards implementation of the project with time line.
2. The firm shall pay the applicable time extension fee to KREDL.

ಈ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿನ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

ಪಿ.ಆರ್ 2921

## INFORMATION TECHNOLOGY, BIO TECHNOLOGY AND SCIENCE AND TECHNOLOGY SECRETARIAT

**Sub:** Selection of Institutions for commencing B.T. Finishing Schools

**Read:**
1) The Millennium Biotech Policy-II vide Govt. Order No. ITD 58 MDA 2008, dated 18-07-2009.
2) Government Order No ITD 01 MDA 2010, dated: 27.5.2010.
3) Government Order No ITD 01 MDA 2010 (P), dated: 03.6.2010
4) Letter No: KBITS/2TR/BTP/BTFS/F6/09-10, dated: 13-10-2010 sent by MD, KBITS and Director TBT.

**PREAMBLE:**

State Government in the revised Millenium Biotechnology Policy-II issued vide Govt. Order No. ITD 58 MDA 2008, dated 18-07-2009, has announced to establish B.T. Finishing Schools in the State, with appropriate course content and duration to equip students, particularly Graduates and Post Graduates, with necessary employable skills to make them industry-ready. The State

Government would provide financial support up to 25% of the cost of equipments / instruments required for the B.T. Finishing Schools subject to maximum of Rs. 1.00 crore per B.T. Finishing School towards setting up of necessary Laboratory instruments and other technology related gadgets and equipment required for training of students. Finishing Schools will have ABLE recognition and accreditation from a recognized university..

In the Government Order read at [2] above, Government were pleased to constitute the Selection Committee under the chairmanship of Prof. Padmanabhan, Professor Emeritus IISC and Member, Vision Group on Biotechnology to suggest eligibility criteria, course content, duration, selection procedure, university affiliation etc., for setting up of B.T. Finishing School.

In the Government Order read at [3] above, Government were pleased to accord approval for establishment of BT Finishing Schools by **Manipal Life Sciences Center, Manipal, Udupi Mangalore and Dayanand Sagar Institution, Kumara Swamy Layout, Bangalore,** as recommended by the selection committee.

In the letter dated 13-10-2010 read at [4] above, MD, KBITS has reported that Expression of interest was invited for the second time to establish B.T Finishing Schools from institutions/colleges, and in response 25 applications were received.

The Selection committee under the Chairmanship of Prof. Padmanabhan, met on 27.9.2010 for scrutinizing the 25 applications received for selecting the eligible institutions / colleges for establishment of B.T. Finishing School. Out of 25 applicants 19 applicants made power point presentation. The committee evaluated the applications based on the following criteria.

1) Reputation/Credibility of the institution,
2) Strength in Biotechnology [building and equipment]
3) Quality / Strength of the Faculty,
4) Link with industries.

The Selection Committee has selected the following 10 institutions for starting of B.T. Finishing Schools.

**I Siddaganga Institute of Technology,** B.H. Road, Tumkur – 572103

The subjects selected for BTFS and Industry Partner are as follows:

1) Fermentation & Bioprocessing – Biocon, Inbiopro Solutions, Richcore Life Sciences Pvt. Ltd. Agriland Biotech
2) Bioinformatics & Rational Drug Design – Polyclone Bio services
3) Pre-clinical, Clinical Research, Biostatistics and Data Management – Infovalley Bio system Pvt. Ltd, Biocon

**II Probiosys Marketing Office,** No. 1374, 1st Floor, 32 'E' Cross, 4th T Block, Jayanagar, Bangalore-560 041.

The subjects selected for BTFS and Industry and industry Partner are as follows:

1) Fermentation & Bio processing – Zydus Cadilla, Indian Immunologicals, Serum Institute
2) Biosensors and Medical Devices – Automed Systems Pvt. Ltd., Digical Engineering Service
3) Nutraceuticals and Food Processing - Hindustan Unilever, Himalaya, Cococola India, Dabur.

**III PES Institute of Technology,** 100 ft. Ring Road, Banashankari-III Stage, Hoskerehalli, Bangalore-560085

The subjects selected for BTFS and Industry partner are as follows:

1) Bio Informatics & Rational Drug Design – Aurigene, Avesthagen, Jubilant Biosys.
2) Pre-clinical, Clinical Research, Biostatistics & Data Management – PES Institute of Medical Science & Research, Kuppam, Quintiles, National Institute of Animal Physiology & Nutrition.

**IV JSS College of Arts, Commerce & Science,** Ooty Road, Mysore – 570 025

The subjects selected for BTFS and Industry partner are as follows:

1) Plant tissue culture and Micro Propagation – M/s. Labland Biotech Pvt. Ltd., Mysore.
2) Protein Expression and Scale up – M/s. Prosetta Bio conformatics Pvt. Ltd., Mysore.
3) Fermentation and Bio processing, Nutraceuticals and Food Processing – M/s. Probiosys Pvt. Ltd., Bangalore.
4) Cellular & Molecular Diagnostics – Invitrogen Bio services India Pvt. Ltd., Mysore.

**V St. Aloysius College,** PB 720, Light House Hill Road**,** Mangalore-575 003

The subjects selected for BTFS and Industry partner are as follows:

1) Fermentation & Bio processing – Probiosys, Navya Bilogicals.
2) Protein Expression and Scale up- Probiosys, Navya Bilogicals.

